ಐದನೆಯ ಐಕ್ಸನ

# ಶಿವ ಲೇಶ್ಶೈ

[ಮಿಶ್ರಛಂದ ಕಾವ್ಯ]

ಅ. ಗೌ. ಕಿ.



ಯುಗಪುರುಷ ಪ್ರಕಟನಾಲಯ,
ಕಿನ್ನಿಗೋಳಿ, ದ. ಕ.

## ಯುಗಪುರುಷ ಪ್ರಕಟನಾಲಯದ

## [ಮೊದಲ ಮುತ್ತು] ಕ್ಷಾತ್ರದರ್ಶನ

"……ಚಿತ್ತಾಕರ್ಷಕ ವರ್ಣನೆಗಳು, ಮೋಹಕವಾದ ಸಂಭಾಷಣೆ, ಸರಳ ಸುಂದರವಾದ ಭಾಷೆ, ಭಾವಭಂಗಿಗಳಲ್ಲಿ ಹೊಸ ಹೊಸ ಪ್ರಯೋಗಗಳು ಹೇರಳವಾಗಿವೆ. ಹೊಸ ರೀತಿಯ ಉಪಮೆಗಳಿಂದ ಶ್ರೀ ಕಿನ್ನಿಗೋಳಿಯವರ ಕವಿತಾಶಕ್ತಿ ಮೆರಗುಗೊಂಡಿದೆ….. ಇಂಥಾ ಕವಿಯನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ 'ಯುಗಪುರುಷ' ಪ್ರಕಾಶಕರು ಅಭಿನಂದಾರ್ಹರು."

–ಪುಸ್ತಕ ಪ್ರಪಂಚ, ಮೈಸೂರು.

ಶ್ರೀ ಕಡೆಂಗೋಡ್ಲು ಶಂಕರ ಭಟ್ಟರ ಅನಂತರ ದಕ್ಷಿಣ ಕನ್ನಡದಲ್ಲಿ ಸುದೀರ್ಘ ಕಥನಕವನದಲ್ಲಿ ಕೈಪಳಗಿದವರೆಂದರೆ ಶ್ರೀ ಕಿನ್ನಿಗೋಳಿಯವರು…… ಈ ಕಾವ್ಯ ಸೊಗಸಾಗಿದೆ. ಹಲವೆಡೆ ಮಾತುಗಳು ಕಿಡಿಗಳಂತೆ ಹಾರಿ ಇಡೀ ದೃಶ್ಯವನ್ನು ನಮ್ಮ ಮುಂದೆ ನಿಲ್ಲಿಸುತ್ತವೆ. ಎಷ್ಟೋ ಸ್ಮರಣೀಯವಾದ ಪಂಕ್ತಿಗಳು ಇದ್ದರೂ ಇಲ್ಲಿ ಸ್ಥಳಾಭಾವದಿಂದ ಉದಾಹರಿಸಲಾಗಲಿಲ್ಲ. ಕಿನ್ನಿಗೋಳಿಯವರು ಆಧುನಿಕ ಕನ್ನಡದ ಉತ್ತಮ ಕಥನ ಕವಿಗಳಲ್ಲಿ ಒಬ್ಬರೆಂದು ಮುಕ್ತ ಕಂಠದಿಂದ ಹೇಳಬಹುದು.

–ಕರ್ಮವೀರ, ಹುಬ್ಬಳ್ಳಿ.

## [ಎರಡನೆಯ ಎಸಳು] ಯೋಗಲಹರಿ

"…..ಯೋಗಲಹರಿಯಲ್ಲಿ ಮೊದಲ ಭಿಕ್ಷುಣಿ, ಪುನರ್ಮಿಲನ ಮತ್ತು ಚಿತಾಗ್ನಿ ಎಂಬ ಮೂರು ಖಂಡಕಾವ್ಯಗಳಿವೆ…… ಈ ಕವಿಗಳಲ್ಲಿ ಪ್ರತಿಭೆಯಿದೆ. ಹಲವಾರು ಹಳೆಯ ಹೊಸ ಕಾವ್ಯಗಳ ಅಭ್ಯಾಸದ ಪ್ರಭಾವವೂ ಇದೆ. ಶ್ರೀಯುತರಲ್ಲಿ ಕಂಡು ಬರುವ ವೈಶಿಷ್ಟ್ಯವೆಂದರೆ ಅನೇಕೋಪಮಾನಗಳನ್ನು ಕೊಟ್ಟು ಒಂದು ವಿಷಯದ ಸ್ಫುಟಚಿತ್ರವನ್ನೀಯುವುದೆಂದರೆ ಬಹುಶಃ ತಪ್ಪಾಗದು. ಹಾಗೆ ಉಪಮಾನಗಳನ್ನು ಕೊಡುವಲ್ಲಿ ಅವು ನೂತನವಾಗಿ, ದೀಪಕವಾಗಿ, ರಸಸ್ಯಂದಿಗಳಾಗಿ ವಿರಾಜಮಾನವಾಗಿವೆ. ಶ್ರೀಯುತರು ಮೇಲ್ಮಟ್ಟದ ಕವಿಗಳ ಯೋಗ್ಯತೆಯುಳ್ಳವರೆಂದು ಕಂಡು ಬರುತ್ತದೆ. ಕಾವ್ಯಮಾನಂದಾಯ- ಎಂಬುದು ಈ ಪುಸ್ತಕವನ್ನೋದುವಾಗ ಯಥಾರ್ಥವೆಂದೇ ಸಿದ್ಧವಾಗುತ್ತದೆ. ನಮ್ಮಲ್ಲಿ ತನ್ಮಯತೆಯನ್ನುಂಟುಮಾಡುವ ಮೌಲ್ಯಯುಳ್ಳ ಪದಪ್ರಯೋಗ, ಭಾವಪ್ರಕಾಶನ ಇತ್ಯಾದಿಗಳು ಪ್ರಶಂಸನೀಯಗಳೇ ಸರಿ…."

–ನವಭಾರತ, ಮಂಗಳೂರು.

ದನೆಯು ಐಕ್ಷನ

# ಶಿವ ಲೇಶ್ಯೆ

(ಮಿಶ್ರಛಂದ ಕಾವ್ಯ)

ಅ. ಗೌ. ಕಿ.



*"Happiness is the only thing we can give without having"*

—Carmen Sylva.

೧೯೫೬.

ಯುಗಪುರುಷ ಪ್ರಕಟನಾಲಯ,
ಕಿನ್ನಿಗೋಳಿ, ದ. ಕ.

ಸಂಪಾದಕರು:

ಕೊ. ಅ. ಉಡುಪ. ಅ. ಗೌ. ಕಿನ್ನಿಗೋಳಿ.





ಬೆಲೆ: ಒಂದುವರೆ ರೂಪಾಯಿ.

ಪ್ರಕಾಶಕರು:
ಕೊಡತ್ತೂರು ಅನಂತಪದ್ಮನಾಭ ಉಡುಪ,
ಯುಗಪುರುಷ ಪ್ರಕಟನಾಲಯು,
ಕಿನ್ನಿಗೋಳಿ, ದ. ಕ.

ಮುದ್ರಕರು:
ಆನಂದ ಪ್ರಿಂಟಿಂಗ್ ವರ್ಕ್ಸ್, ಕಿನ್ನಿಗೋಳಿ, ದ. ಕ.

# ಪ್ರಕಾಶಕರ ಎರಡು ಮಾತು.

ನಮ್ಮ ಯುಗಪುರುಷ ಪ್ರಕಟನಾಲಯದ ಐದನೆಯ ಐಕ್ಷವವೆಂದು ಈ 'ಶಿವ ಲೇಶ್ಯೆ'ಯನ್ನು ವಾಚಕರಿಗೀಯಲು ಸಂತೋಷವಾಗುತ್ತದೆ.

ಕವಿವರ್ಯ ಅ. ಗೌ. ಕಿ. ಅವರ ಈ ಶಿವ ಲೇಶ್ಯೆಯು ಅನುಕ್ರಮವಾಗಿ ನಮ್ಮ ಯುಗಪುರುಷ ಮಾಸಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದಾಗ ನಾಡಿನ ಅನೇಕ ಸಾಹಿತಿಗಳು, ಸಹೃದಯಿಗಳಾದ ಕಾವ್ಯಪ್ರೇಮಿಗಳು ಮೆಚ್ಚುಗೆಯನ್ನು ಸೂಚಿಸಿ ಕೊಂಡಾಡಿರುವುದರಿಂದ ನಾವಿದನ್ನು ಅಭಿಮಾನದಿಂದಲೇ ತಮ್ಮ ಕೈಗರ್ಪಿಸುತ್ತಿದ್ದೇವೆ.

ವರ್ಷಕ್ಕೆ ರೂ. ಮೂರರ ಕೃತಿಗಳನ್ನು ನಮ್ಮ ಯುಗಪುರುಷದ ನೆರವುಗಾರರ ಬಳಗಕ್ಕೆ ಕೊಡುವ ಕುರಿತು ನಾವಿತ್ತಿದ್ದ ವಾಗ್ದಾನದ ಪ್ರಕಾರ ಒಂದನೆಯ ವರ್ಷವನ್ನು ಮುಗಿಸಿ, ಎರಡನೆಯ ವರ್ಷದಲ್ಲಿ ಎರಡನೆಯ ಕೃತಿಯಾಗಿ ಈ ಶಿವ ಲೇಶ್ಯೆಯು ಪ್ರಕಟವಾಗುತ್ತಿದೆ. ಸಹೃದಯಿಗಳ ಪ್ರೋತ್ಸಾಹವು ಹಿಂದಿನಂತೆ ಇದಕ್ಕೂ, ಇನ್ನು ಮುಂದೆಯೂ ದೊರೆಯುವುದೆಂಬ ನಂಬಿಕೆ ನಮಗಿದೆ.

ಅಕ್ಷರಸ್ಖಾಲಿತ್ಯಾದಿಗಳಿಲ್ಲದಂತೆ ಸುಂದರಮುದ್ರಣದ ಒಪ್ಪವನ್ನಿತ್ತು ಇದರ ಗುಣವನ್ನು ಹೆಚ್ಚಿಸಿದ ಆನಂದ ಪ್ರಿಂಟಿಂಗ್ ವರ್ಕ್ಸ್, ಕಿನ್ನಿಗೋಳಿ-ಇವರಿಗೆ ಕೃತಜ್ಞತೆಗಳನ್ನರ್ಪಿಸುತ್ತೇವೆ.

ಕಿನ್ನಿಗೋಳಿ, ದ. ಕ.
೨೨—೯—೧೯೫೭.

—ಕೊ. ಅ. ಉಡುಪ.

ಇದೇ ಲೇಖಕರ ಇತರ ಕೃತಿಗಳು.

೧. ಕ್ಷಾತ್ರದರ್ಶನ
(ಮಿಶ್ರಛಂದ ಕಾವ್ಯ)

◎

೨. ಯೋಗಲಹರಿ
(ಮೂರು ಖಂಡಕಾವ್ಯಗಳು)

◎

೩. ವಧೂ ವಸಂತಸೇನೆ
(ಸಂ. ನಾಟಕ ಕಥಾವಸ್ತು)

◎

೪. ನಾಗವರ್ಮನ ಕಾದಂಬರಿ
(ಕಾವ್ಯವಸ್ತು ಕಥೆ)

◎

೫. ಒಡ್ಡಿದ ಉರುಳು
(ಸಾಮಾಜಿಕ ಕಾದಂಬರಿ)

# ಶಿವ ಲೇಶ್ಯೆ

[ಕದಿರು ಒಂದು]

೧

'ಕರ್ರ್ರಿ'ನ್ನುವ 'ಕಾಕಾ'ಯೆನ್ನುವ ಕಾ–
ಕಾಳಿಯ ಹಾರಿಕೆಯುಬ್ಬಟೆಗೆ,
ಬಿರ್ರನೆ ಬಿಸಿಯಾರಿತೊ, ಕೆಚ್ಚಿನ ಕಿಡಿ
ನಂದಿತೊ ಖಾನನ ಗಜಘಟೆಗೆ?
ಮೊಳಗುವ ಭೇರಿ ನಗಾರಿಯ ತಾಳಕೆ
ಕೊಂಬಿನ ಗಾನವು ಮೇಳವಿಸೆ,
ಕೊಳುಗುಳದಮಲೇರುವ ರಣವಾರಣ
ಅಳುಕಿತೆ ಧೀಂಕಿಡೆ ದಿಕ್ಕುದೆಸೆ?

೨

ಅಂಬಾರಿಯ ನಡು ಅಫಜುಲ್‌ಖಾನನ
ತುಂಬು ತುರಾಯಿಯೆ ಕೆಳಬೀಳೆ,
'ಮುಂಬರಿದರೆ ಕಾದಿದೆ ಕೆಡುಕೆ'ನ್ನುವ
ಸೂಚಿಕೆಯನ್ನದು ಕಣಿಹೇಳೆ!
ಮಾವುತನಂಕೆಗೆ ಬಾರದ ಆನೆಯು
ಜೀವಿಗೆ ವಶವಾಗದ ಮರಿಯು
ಸಾವಿನ ಹಜ್ಜೆಯ ಹೋಲಿತು! ಖಾನನು
ಏರಿದ ಬೇರೆಯೆ ಪಲ್ಲಕಿಯ.

೩

‘ಬೆಟ್ಟದ ಇಲಿ’ಯನು ಸಂದಿಸೆ ಖಾನನು
ಕಟ್ಟಾಳ್ಗಳ ನೆರೆ ನೆರಹಿದನೆ?
ರಾವುತರೆನಿತೋ ಮಾವುತರೆನಿತೋ
ಪದಾತಿಯೆನಿತೋ! ಏತಕೆನೆ-:
ಬೀಜಾಪುರ ಗದ್ದುಗೆಯಭಿಮಾನದ
ಸೂಜಿಯ ಮೊನೆ ಮೊಂಡಾದುದನು
ಚೂಪಾಗಿಸೆ, ಮಸೆಮಸೆಯಲು ದಂಡಿನ
ಕಾಪನು ಕೂಡುತಲೇ ಬಹನು!

೪

ಬಾರಾರಾಣಿಯು ಬಗೆಗುದಿ ಕಿಚ್ಚಿಗೆ
ದೇವಳಗಳ ಮುರಿದೊಟ್ಟಿದರು!
ಗೋವನು ಕಡಿದರು, ನೆತ್ತರ ಹಿಡಿದರು
ಘೃತವೆನೆ ಘಟಗಳ ಕಟ್ಟಿದರು!
ಸ್ವರ್ಗೀಯತೆ ಶಿಲ್ಪದಿ ಪಡಿಮೂಡಿದ
ಮೂರುತಿಗಳ ಹುಡಿಗುಟ್ಟಿದರು;
ಅರ್ಚಕವೃಂದದ ಜುಟ್ಟನು ಕಡಿದರು,
ಗಡಿಗೆಯ ನೆತ್ತರ ಕುಡಿಸಿದರು!

೫

ಗರ್ಭಾಂಗಣದೊಳು ಗೋಮಾಂಸದ ಹೊರೆ
ನೆತ್ತರಿನೆಸರಲಿ ಬೇಯುತಿರೆ,
ಹಾರುವರನು ಹಿಡಿತಂದರು, ಪಾರಣೆ
ಯೂಟಕೆ- ಚಾಟಿಯು ಸೋಯುತಿರೆ!
‘ಕುನ್ನಿ ಶಿವಾಜಿಯು ನೆಚ್ಚಿದ ಕುರಿಗಳೆ
ತಿನ್ನಿರಿ’– ಎನೆ ಬಾಯ್ತೂರಿದರು;
ಉಣ್ಣದವರು ಒದೆಯುಂಡರು; ಉಂಡವ
ರೋಕಿಸಿ ಕರುಳನೆ ಕಾರಿದರು.

## ಶಿವ ಲೀಕ್ಷೆ

೬

ನರಕದ ನಾಯಕರೇರುವ ಪಾಪದ
ದೂಪೆಯ ದಿನ್ನೆಯ ಗದ್ದುಗೆಗೆ,
ತರಳರ ಹರಣವ ತನ್ನಿಯ ಮಾನವ
ಕಳೆಯುವ ಕೇಡಿನ ಹೊದ್ದುಗೆಗೆ,
ಮೇಲಾಟವೊ ಎನೆ, ರಕ್ಕಸರಾಟದಿ
ರಂಪಿನ ಕೇಕೆಯನಿಕ್ಕಿದರು!
ದಾನವನೃತ್ಯದ ರಂಗಕೆ ಕರುಣೆಯ
ಕುಡಿಯನು ಕೊಯ್ಯುತ ತಿಕ್ಕಿದರು.

೭

ಸ್ವದೋಷಕರ್ಮದ ಕತ್ತಲೆಯನೆ ಬೆಳ
ಕೆನ್ನುತ ಮನೆಗಿಚ್ಚೊಟ್ಟಿದರು;
ಮಲಗಿದ ತಾಯ್‍ಮಕ್ಕಳು ಹೊರಡದ ತೆರ
ಬಾಗಿಲ ಬೀಗವ ಹೆಟ್ಟಿದರು!
ಹಸುಮಕ್ಕಳ ಹಿಡಿದೊಯ್ದರು ಹೆಬ್ಬುಲಿ
ಮೇಕೆಯ ಮರಿಗಳ ಹಿಡಿವಂತೆ,
ಶಿಲೆಗಪ್ಪಳಿಸಿದರಯ್ಯೋ! ಅಗಸನು
ಗೋಣಿಯನೊಗೆಯಲು ಬಡಿವಂತೆ!

೮

ಅಫಜುಲ್ ಖಾನನ ಭಟರಾಟೋಪಕೆ
ರಕ್ಕಸತನವೂ ರೋಸಿತೆನೆ,
ಪೆಣದಿನಿಗಳ ಪೆಂಕುಳಿತನವೇರಿದ
ಪಿಶಾಚಲೀಲೆಯದೊಂದೆ ಎನೆ!
ನರಕವೆ ನಾಚಿತು, ರೌರವ ಜರಿಯಿತು
ಕುಂಭೀಪಾಕವೆ ಕುಪ್ಪರಿಸೆ,
ತೃಪ್ತಿಯ ನಂಜುಸಿರೆಳೆಯುತ ಖಾನನು
ತಿರ‍್ರನೆ ತಿರುಪಿದ ತುದಿವಿಾಸೆ!

ನುೂರು

೯

ನೆಲವತ್ತಿತು, ಜಲಬತ್ತಿತು, ಸುಟ್ಟುರಿ
ಸುಯ್ಯುತ ನಿಂದಿತು ಮರೆಯಾಗಿ!
ಬಾಂದಳ ಬಾತಿತು, ನೇಸರ ಪಡುಗಡೆ-
ಗೋಡಿದನದಕೋ ತ್ವರೆಯಾಗಿ!
'ಅಲ್ಲಾ! ಕ್ಷಮಿಸೆ'ನ್ನುತ ಸಗ್ಗದೊಳಾ
ಪೈಗಂಬರ ಮೊಗ ಮುಚ್ಚಿದನೆ?
ತನ್ನವತಾರದ ಸೃಷ್ಟಿಯ ಭಕ್ತರ
ಅನ್ಯಾಯಕೆ ಕೊನೆ ಹಚ್ಚಿದನೆ?

೧೦

ಪಾಪದ ಗೆಡ್ಡೆಯ ಗೂರುವ ಹಂದಿಗೆ
ಬೇಪಿನ ಬಲೆ ಬೀಸಿದೊಲಂತೆ,
ಕೋಪದ ಗುಡ್ಡೆಯನೇರಿದ ಮಂಬಿಗೆ
ಚೂಪಿನ ಕೊಂತವನೆಸೆದಂತೆ,
ಶಾಪದ ಸಿಡಿಲೇ ಬಡಿಯಿತು! ಸತ್ಯದ
ತಾಪವೆ ಸಿಡಿಯಿತು! ಸುದ್ದಿಯೆನೆ
ತುಳಜಾಪುರದಲಿ ಭವಾನಿಮಂದಿರ
ಕೆಡೆದುದ ಶಿವಾಜಿ ಕೇಳಿದನೇ!

೧೧

ನರನಾಡಿಯ ಕಣಕಣದಣುವಿನ ನಡು
ಮಿಂಚಿನ ಬುಗ್ಗೆಯೆ ಪುಟಿಯಿತಲಾ!
ವಿದ್ಯುತ್ತಿನ ತೂಗುಯ್ಯಲೆ ಜೀಕುತ
ಸರ್ವಾಂಗವೆ ಸಲೆ ಸೆಟೆಯಿತಲಾ!
ಶತಹತಮೂರ್ತಿಯ ವಾರ್ತೆಯ ಕೆತ್ತನೆ
ಶಿವಾಜಿಯೆದೆಯನು ಕಟೆದಿತ್ತು;
ಹೃನ್ಮಂದಿರ ತಲೆಯೆತ್ತಿತು, ಹರಣದ
ದಿವ್ಯಾರಾತ್ರಿಕೆ ಬೆಳಗಿತ್ತು!

೧೨

ಕಣ್ಣಾಲಿಯ ನಡು ಚಿಚ್ಛಕ್ತಿಯ ಕಿಡಿ
ಕುಳ್ಳಿರೆ ಮುಕ್ಕಣ್ಣನ ಸಮಕೆ,
ಮುಪ್ಪೊಳಲಸುರರ ಮುಕ್ಕಲಿಕೆದ್ದನೊ?
'ಹುಲಿಯುಗರೇ' ಸರಿ ಶೂಲಕ್ಕೆ!
ಶಿವಶಕ್ತಿಯೆ ಮೈಗೂಡಿತು, ಬೆಟ್ಟದ
ದುರ್ಗಕೆ ಕೈಲಾಸವೆ ಬಂತು.
ಪ್ರತಾಪಗಡವೇ ನಡುಗಿತು. ಮಾವಳಿ
ಗಣದುತ್ಸಹ ಮುಗಿಲೇರಿತ್ತು!

[ಕದಿರು ಎರಡು]

೧

ಕ್ಷಾತ್ರದ್ಯುತಿಯವತರಿಸಿತೆ? ಭವ್ಯ ಚ-
ರಿತ್ರೆಯ ಪುಣ್ಯಫಲವೆ ಬಂತೆ?
ಸಿತ್ತಾತ್ಮನ ನೈರ್ಮಲ್ಯವೆ ಮೂಡಿತೆ?
ಸತ್ತ್ವದ ಹುರುಳೇ ಹೊಳವಾಯ್ತೆ?
ಕ್ರತುಶಕ್ತಿಯೆ ಮೈವೆತ್ತಿತೆ ಮಾತೆಯ
ಮಹಿಮೆಯೊಳೀ ಮರ್ತ್ಯದ ನೆಲೆಗೆ?
ಮಂಗಲದೋಜೆಯೊ? ಮಾತಾಯ್ ಜೀಜೆಯೊ?
ಎನುವೋಲ್ ಬಂದಳು ಮಗನೆಡೆಗೆ.

ಶಿವ ಲೀಲೆ

೨

ಕಾಣಬಿಗಳುದ್ಘೋಷದ ತೆರೆ ಮುಸಗಿತು
ಮಾವಳಿಗಳ ಮಾಸಾಗರದಿ
‘ಹರ ಹರ ಮಾದೇವಾ’ ಎನೆ! ಮಂದ-
ಸ್ಮಿತವರಳಿತು ಮಾತೆಯ ಮೊಗದಿ.
ಸಿದ್ಧಿಯ ಸಂಪದದೆಡೆ ಸಾಧನೆ ಮುಗಿ-
ಬಿದ್ದೆರಗಿತು! ಪದಪಂಕಜಕೆ
ಮುದ್ದಿಕ್ಕಿತು ತಲೆದುಂಬಿಯು! ಶಿವಾಜಿ
ಹೊದ್ದನು ತಾಯಡಿಯನು ಶಿರಕೆ.

೩

ಬಿಲ್‌ಬಾಗಿತು ಶರಧಾರಣಕೆನೆ ತಾಯ್
ಎತ್ತಲು, ಕೌಂಗಿನ ತೂಗಂತೆ,
ಬಾಗಿದಳದೊ! ಧೃತಿಕುಂಜದ ಕಸುಗಾಯ್
ಮಾಗಿಸುತಿಹಳೆನಬೇಕಂತೆ!
“ಸಿಂಹಪೋತನೇ ಸಿಡಿದೇಳೆ”ನ್ನುವ
ಸಿಂಹಿಣಿಯಭಿಮಾನದ ವರಕೆ
ಸ್ವಸ್ತಿಯ ಸೇಸೆಯ ತಳಿಯಿತು ಕಣ್ಣಿನ
ಬಾಷ್ಪದೆ ಎದೆದುಂಬಿದ ಹರಕೆ.

೪

ಮುಸುರುವ ಮೌನಕೆ ಉಸಿರೊತ್ತಿದಳೆನೆ
ನೊಸಲಿಗೆ ಕುಂಕುಮ ತಿಲಕವನು
ಒಸೆದಿಟ್ಟಳೊ? ವಶಕೊಟ್ಟಳೊ ಭಾರತ
ಭಾಗ್ಯದ್ವಾರದ ಚಿಲಕವನು?
“ಧರ್ಮೋದ್ಧಾರಕ, ಮುನ್ನಡೆ; ತಾರಕ-
ದೈತ್ಯನ ದಂಡಿನ ಷಣ್ಮುಖನೆ!
ನೆನೆಯುಂಬಿಕೆಯನು, ಹಿಡಿ ನಂಬಿಕೆಯನು,
ಬಿಡುಗಡೆಯನ್ನೆಳೆ ತಾ ಮಗನೆ!

೫

“ಕಡಿಯುವ ಕಲೆಯೋ ಮಡಿಯುವ ಬೆಲೆಯೋ
ಮುಡಿಪಾಗಿರೆ ಧರ್ಮದ ಋಣಕೆ,
ಕೃಶಕಂಕಾಲಕೆ ಜಡತೆಯ ಮೂಲಿಕೆ
ತಡೆಯುಂಟೇ? ಧುರ ಸಮ ತೃಣಕೆ!
ಮುಂಜಾನೆಯ ಮಂಜಿನ ಹನಿ ನೇಸರ
ಬಿಂಬವನಾಂತೇ ಆರುವುದು;
ಭಾಜನ ತುಂಬಿಸಿ ಮುಚ್ಚಿರಿಸಿದ ಜಲ
ವಲ್ಲವೆ ಕೊನೆಗೂ ನಾರುವುದು?

೬

“ಶೌರ್ಯಾರ್ಣವ ತಲ ಶಾಶ್ವತ ಕೀರ್ತಿಯ
ಗೌರದ್ಯುತಿಮುಕ್ತಕಗಳಿಗೆ
ತೌರಾಗಿರೆ, ಹೇಡಿಯು ಹೊಕ್ಕಿಳಿವನೆ
ಹರಣದ ಭಾರವೆ ಹಿರಿದಾಗೆ?
ಕಾರ್ಯಾರಂಭಕೆ ಕೆಡುಕನು ಶಂಕಿಸಿ
ಜಾರಿಕೊಳುವ ಜಂಬುಕಬುದ್ಧಿ
ತೋರುವರಾರೀ ತೋಳ್ತೀಟೆಯ ಕಲಿ
ಕಟ್ಟಾಳುಗಳಲಿ? ಕೈಯೆತ್ತಿ!

೭

“ನೈವೇದ್ಯದ ತಳಿಗೆಯ ನಾಯ್‌ನೆಕ್ಕಲು
ನಾಲಗೆ ನೀರೂರಿಸಿ ಬಂತು;
ನೋಡುವಿರೇ? ಬಡಿದೋಡಿಸುವಿರೆ? ಪಡಿ
ನುಡಿಯಾಡಿರಿ ಉತ್ತರಕೊಟ್ಟು.
ಉರುಳಿದ ದೇವಳದೆದೆಯಂಗಣಗಳ,
ನರಳಿದ ಸೋದರಿಯರ ನೋವ,
ನಾರುವ ತಿಪ್ಪೆಯ, ಬಾಡಿನ ತುಪ್ಪೆಯ
ನೆನೆಯಿರಿ! ಕಣ್ಣೀರದೆ ತೇವ?

೮

"ನ್ಯಾಯಾಂತಿಹ ಮಾನವ್ಯದ ಹೊಲದಲಿ
ಬೀರಸಿರಿಯ ತೆನೆ ಹಾಲೇರಿ
ಹಣ್ಣಿಸುತಿರೆ, ಬಂದಿರುವೀ ಗಾವಿಲ
ತಂಡದಿ ಜಳ್ಳಾಗದೆ ತೋರಿ!
ಗಳಿಗೆಯ ಬಾಳಿನ ಹರಣವನಳೈದೆ
ಹಂದರನಡು ಹುಗಿದರು ಕೂಡಾ,
ಸಾವಿನ ದಿಟ್ಟಿಗಗೋಚರವೇ? ಸುಡಿ;
ಸೋಲ್ಮುಸುಡಿನ ಬೆಳ್ತನ ಬೇಡ!

೯

"ಕರ್ಮದ ಧರ್ಮದ ಕವಚವು ಕಾವುದ
ನಂಬಿರೆ ಕರ್ತವ್ಯಕೆ ಸಿದ್ಧಿ
ಬಂದೇ ಬರುವುದು. ದುಡಿಮೆಯ ದಾರಿಯು
ನಿಂದೆಯೆ? ಅಪವಿತ್ರವೆ ಶುದ್ಧಿ?
ಮದಿರೆಯೆ ಗಂಗಾಜಲ? ವಿಂಧ್ಯಾಚಲ
ಕುಪ್ಪೆಯೆ? ಹಿತ್ತಾಳಿಯೆ ಹೊನ್ನು?
ಹವಿಯೆಂಜಲೆ? ಕಹಿ ನಂಜಲ್ಲಲೆ ಸವಿ?
ಸಿಗಿವುದೆ ಗಂಟಲ ತನಿಹಣ್ಣು

೧೦

"ಬುದ್ಧಿಯನಾತ್ಮದ ಶುದ್ಧಿಯನಿತ್ತಿಹ
ಪರಶಕ್ತಿಯ ಪಾವನವರವು
ಪೌರುಷವೊಂದೇ ಜೀವಿಗೆ. ಸೃಷ್ಟಿಯ
ನಿಯತಿಗೆ ನೆರವಾಗಲು ಎರವು–
ಗೊಂಡಿದೆ ಗಂಡುತನದ ಬೆಲೆ, ದಿಟ್ಟಿಯ
ಕಣ್ಣ ಕನೀನಿಕೆ ತಳೆದಂತೆ!
ತೂಗದ ಸರಕಿಗೆ ಬೆಲೆಯಿರೆ, ಸೆಟ್ಟಿಯ
ತಕ್ಕಡಿ ತೂಗುವುದೇಕಂತೆ?

೧೧

"ಒಣಗಿರೆ ಮಾನವು ಕಾಯದ ಕೊರಡನು
ಕೊಳ್ಳದು ಕಿಚ್ಚೊ; ಮಣ್ಣೊಡಲು
ಹಿಡಿಯದು; ಹೊನಲೊಯ್ಯದು; ತೆರೆಜಾಡಿಸಿ
ತಳ್ಳುವುದೊದೆಯುತ್ತಲೆ ಕಡಲು!
ಹೆಬ್ಬುಲಿ ಹಸಿದಿರೆ ಕೊಳ್ಳಿಯ ಮೇಲಕೆ
ಹಾರೆನ್ನುತ ಹೇಳಲುಬೇಕೆ?
'ರಣಪ್ರಮತ್ತರು ಮರಾಠವೀರರು'
ಖಾನನ ಕುರಿಬಳಗವು ಸಾಕೆ?

೧೨

"ಸಿಡಿಲಿಗೆ ತಪ್ತತೆ, ಭಯ ನಿರ್ಲಿಪ್ತತೆ
ಸಿಂಹಕೆ ಸೃಷ್ಟಿಯ ಸಹಜಗುಣ!
ಜ್ವಾಲಾಮುಖಿ ಲಾವಾರಸದೆದುರಿಗೆ
ಸೊಪ್ಪಿನ ರಾಸಿಯದೇನು ಘನ?
ದಾವಾಗ್ನಿಯ ದಳ್ಳುರಿಯನು ಮುತ್ತಲು
ಬಾವಲಿಗಳ ಪಡೆ ಬರಬಹುದೆ?
ತಾಯ್ನಾಡಿನ ಕಡುಗಲಿಗಳೆ, ಹುಲಿಗಳೆ,
ಸಿಡಿಲುಗಳೇ ನಿಮಗವರಿದಿರೆ?

೧೩

"ಹಸುಗಳ ನೆತ್ತರ ಹೊನಲಿಗೆ ಹೆಂಗಳ
ಕಣ್ಣೀರಿನ ಹೆದ್ದೊರೆ ಸೇರಿ,
ಹಸುಮಕ್ಕಳ ತಿಳಿರಗುತದ ತೆರೆಯೊಳ-
ಗದೊ ಶೋಣಿತ ಸಾಗರವಾರಿ
ಕರ್ಮದ ನೌಕೆಗೆ ಕೆಚ್ಚಿನ ಹಾಯಿಯ
ಕಟ್ಟಿರಿ ಕಡೆ ಹಾಯಿಸಲೆಂದು,
ದುಮ್ಮಿಕ್ಕಿರಿ, ಮುನ್ನುಗ್ಗಿರಿ, ಮುಕ್ಕಿರಿ,
ಕುಟ್ಟಿರಿ ಖೂಳರ ತರಿತರಿದು."

೧೪

ಮುಗಿಲೇರಿತು ಮಾವಳಿಗಳ ಬೀರದ
ಖಗವಾಟೋಪದ ಕೊಕ್ಕಿನಲಿ!
ಬಗೆಯಾಕಾಶವ ಮುಸುಕಿದ ನೀರದ
ವರ್ಷಿಸಿತೋ ಎನೆ ಉಕ್ಕಿನಲಿ.
ಕಣ್ದುಂಬಿತು – ಕುಣಬಿಗಳಾವೇಶದ
ರಸಧಾರೆಯ ಜೊತೆ – ಬಾಷ್ಪಾಂಬು.
'ಹರಹರ ಮಾದೇವಾ' ನಿರ್ಘೋಷದ
ಭರಕುಡಿಯಿತು ಬೆಳ್ತನಹಂಬು.

[ಕದಿರು ನೂರು]

೧

ಖಾನನಾಣತಿಯಂತೆ ಕೃಷ್ಣಾಜಿ ಭಾಸ್ಕರನು
ಕರ್ಮಚಾರಿಯ ಕಾರ್ಯಹೊತ್ತು,
ಪಾಪ ತೀರಿದ ಜೀವಿ ನರಕಲೋಕದ್ವಾರ
ದಾಟುವಂದದಿ ಬಂದ ಹೊರಟು.
ಮರೆನೋಡಿ ಮಂತ್ರಗಳ ಮಡಿಲಿಂದ ಹೆಕ್ಕಿದ್ದ
ಕವಡಾಯ್ತು ಸಂಧಾನತಂತ್ರ!
ದೇಹವನು ತೋರಿದರೆ ಮೂಗರಳಿಸದೆ ಜಗ್ಗ?
ಅಂತೆಯೆ ಶಿವಾಜಿಗೆ ಕುತಂತ್ರ!

೨

ಕೃಷ್ಣಾಜಿಯೊರೆವ ಖಾನನ ಕೊಡುಗೆಯೊಕ್ಕಣೆಯ
ಸುಲಭ ಸಂಧಾನವನು ಕಿವಿದು,
ಸಂದೇಹಗೊಳೆ ಶಿವಾಜಿಯು ನೆಟ್ಟ ದಿಟ್ಟಿಯಲಿ
ಕರ್ಮಚಾರಿಯ ಕಣ್ಣ ತಿವಿದು,
ತಳಮಳದ ಒಳಬಗೆಯನದುಮಿದನು ಕೃಷ್ಣಾಜಿ
ಕಿಚ್ಚೊಡಲ ಬನ್ನಿಮರದಂತೆ!
ಮೊಗ ಬೆವರೆ, ಕೊರಳುಬ್ಬೆ, ಉಗುಳು ನುಂಗಿದನೇಕೆ
ಕಹಿಮದ್ದ ನೆಕ್ಕಿದವನಂತೆ?

೩

ಕಂಡನು ಶಿವಾಜಿ ಕೃಷ್ಣಾಜಿಯೊಡ್ಡಿದ ಬಲೆಯ
ಕಿಂಡಿ ಖಾನನ ಕೈಯ ಮಿಣಿಯ
ಗಾಳದಡಗಿನ ಚೂರು ಎಂಬುದನು! ಜೋಯಿಸಗೆ
ಹೇಳಲೇಕನ್ನಿಗರು ಕಣಿಯ?
ದಿಟ್ಟಿಯಲಿ ದಿಟ್ಟಿ, ತೆಕ್ಕೆಗೆ ತೆಕ್ಕೆ, ಎದೆಗೆದೆಯ
ಕೊಟ್ಟು, ಬಿಗಿದಪ್ಪಿ, ಮೈದಡವಿ,
'ಸೋದರನೆ!' ಸೂಕ್ತಿಮಂತ್ರವ ಪಠಿಸಿ, ಭೇದಾಹಿ
ಯನ್ನು ಕಿಳ್ಕಿಡನಿದನು ಕೊಡವಿ.

೪

"ಧರ್ಮದಲಿ ನೀನೆನ್ನ ಬಂಧು-ಸೋದರನಿಂದು,
ಒಂದೆ ಬಸಿರಿನ ಪಿಂಡ ನಾವು!
ಅಣ್ಣ, ಕಂದೆರೆ, ತಾಯಿನೆಲದತ್ತ ನೋಡೊಮ್ಮೆ,
ನಿನ್ನವರೆ ನೊಂದಿರುವ ನೋವು.
ಖಾನನೂಳಿಗದಾಳು ನೀನೆಂಬುದನು ಬಲ್ಲೆ;
ಅದು ಹೊಟ್ಟೆ ಹೊರೆದುಕೊಳಲನ್ನ.
'ಪ್ರಾಣಕಿಂತಲು ಮಾನ ಹೆಚ್ಚೆ'ಂಬ ಹುಟ್ಟಿನಲಿ
ನಾನು ನೀನೂ ಬಂದೆವಣ್ಣ!

೫

“ಧರ್ಮ ಸಂರಕ್ಷಣೆಯ ದಾರಿ ತಪ್ಪೆಸ್ನುವೆಯು?
ನಮ್ಮಮನೆ ನಡುಗಂಬವನ್ನೇ
ಮುರಿಯೆ ಕಾಂಬೆಯು? ಗತಿಸಿತೇ ರಾಜ್ಯದೊಡನೆಮ್ಮ
ಮಾನವೂ? ತನ್ನ ಬಿಂಬವನೇ
ಕಾಂಬನಕ ಕೇಸರಿಗೆ ಆತ್ಮವಿಸ್ಮೃತಿಯಂತೆ–
ಬಳಿಕ ನೆಗೆಯುವುದಾನೆ ಸೀಳೆ!
ತನ್ನ ರಕ್ಷಣೆಗಾಗಿ ಹೆಡೆಹಿಸಿಯದೇ ಕೇರೆ?
ನಮ್ಮ ಹುಟ್ಟೇನದಕು ಕೀಳೆ?

೬

“ನಾಡಿನಲಿ ನೆತ್ತರೋಕುಳಿ ಹರಿಯುತಿದೆ ಕಾಣ!
ಕಾಡಾಯಿತೇ ಜಮ್ಮದಾಣ?
ಗುಡಿಗುಡಿಯ ಹುಡಿಗೈದ, ಹೆಣ್ಣುಗಳ ಹೊಲೆಗೈದ
ಗೋಬ್ರಾಹ್ಮಣರ ಹೊಡೆದ ನಾಣ
ಹೊತ್ತು ದಣಿಪನೆ ಖಾನ? ಮತ್ತೇಕೆ ಸಂಧಾನ?
ಮಾರಿಗೇತಕೆ ಕುರಿಯ ಕರುಣೆ?
ಗೆದ್ದವಗೆ ಗೋಳುಂಟೆ? ಬಡ ಶಿವಾಜಿಯ ಕಡೆಗೆ
ಇಂತೇಕೆ ವಿನಯದನುಕರಣೆ?

೭

“ಸತ್ಯದಲಿ ಕಣ್ಣಿಟ್ಟು ಹೇಳಣ್ಣ ಕೃಷ್ಣಾಜಿ,
ಸಂಧಾನದೀ ಮರ್ಮವೇನು?
ಗರ್ತದಲಿ ಕೆಡೆಯಿಸದಿರೆನ್ನ ಓ, ಸೋದರನೆ,
ಖಾನ ನೆನೆದ ಕುಕರ್ಮವೇನು?”
ಕಣ್ಣು ಸೀರೊರತೆ ಕೃಷ್ಣಾಜಿ ಭಾಸ್ಕರನೆದೆಯ
ಧರ್ಮಸಂಕಟಕೆ ತುಳ್ಳಿಸಿತು.
ಭಾವರಸದಾಳದಲಿ ಬಗೆಯು ಮುಳುಗಾಡುತಿರೆ
ಮೈಯು ಹೊಂಪುಳಿಯ ಮುಳ್ಳಿಸಿತು.

೮

ಧೃತಿಯ ಕವಚವ ತೊಡಿಸಿದಂತೆ, ಶಿವ ಸೌಂದರ್ಯ
ಸತ್ಯಗಳ ಬೆರಸಿ ಬಳಿದಂತೆ,
ಮತಿಗೆ ಮಂಗಲ ಮಹಿಮ ಮೂಡಿದಂತೆ, ಸುಧಾರ್ದ್ರ
ಲೇಪ್ಯವನು ಮೈಯು ತಳೆದಂತೆ,
ಕರ್ತಾರಶಕ್ತಿಯಗಣಿತ ಕೃಪಾಕಿರಣಗಳ
ಲೇಶ್ಯೆಯನು ಹೊಯ್ದು ಹೊಳೆದಂತೆ
ಭಾಸಿಸಲು ಕೃಷ್ಣಾಜಿ ದಿಙ್ಮೂಢತೆಯ ಸೆರೆಗೆ
ಸಿಕ್ಕಿದನು, ಸರ್ವ ಮರೆತಂತೆ!

೯

ಸುಕೃತ ವಪುವಡೆದಪ್ಪಿತೇ? ಭಾಗ್ಯ ಬಾಚಿತೇ?
ಅಖಿಲವೆತ್ತಿತೆ? ಮುಕುತಿ ತೆರೆದು
ತಳ್ಕಿಸಿತೆ? ತನುವ ತನ್ನಾತ್ಮವೇ ತಬ್ಬಿತೇ
–ಎನುವ ಬಗೆ ಚಿತ್ತದಲಿ ಬೆರೆದು
ಬಾಗಿದನು ಕೃಷ್ಣಾಜಿ, ಬೀಗಿದನು, ಮಾಗಿದನು
ಸಾಗಿ ಸಸ್ನೇಹನೌಕೆಯಲಿ
ತೂಗಿ! ಪಂಚಪ್ರಾಣಗಳು ಜೊಂಪಿಸಿದುವಂತೆ
ಸ್ವರ್ಗೀಯತೆಯ ಸುರಕ್ಷೆಯಲಿ!

೧೦

ಜಾಗೃತಿ ಜ್ವಾಲೆಗೆದ್ದೋಡಿದವು ಬಗೆತಳದ
ತಮತಮಿಸ್ರದ ಹುಳದ ಹಿಂಡು;
ಜೇಂದೊಟ್ಟಿ ಜಿನುಗಿತನೆ ಕೃಷ್ಣಾಜಿಯೊರೆಯುವನು–:
“ಖಳರೆದೆಯು ದಗೆಯ ಸಿಡಿಗುಂಡು!
ನಂಜೆದೆಯ ಗಡಿಗೆಯಲಿ ಸುಧೆಯು ಹನಿಗಿಂಬಿಹುದೆ?
ಕಲ್ಗೊಂಬೆಗಿಹುದೆ ಕರುಳರಿತ?
ಕೇಳು ಮುತ್ತನು, ಬಳ್ಕು ನಿರ್ವಂಚನೆಯನರಿಯು,
ಖೂಳರೊರೆತದ ಸೋಗು ಸತ್ಯ!

೧೧

"ನೆತ್ತರಲಿ ತುಂಡವದ್ದಿದ ಕಾಗೆ ಗಿಳಿಯೆ? ಗರಿ
ಕುತ್ತಿಕೊಂಡರೆ ಹದ್ದು ನವಿಲೆ?
ಸತ್ತಂತೆ ಮಲಗಿ ಹಾವಸೆಯ ನಡು ಹೊಂಚಿದರು.
ತುತ್ತುಗೊಳ್ಳದೆ ಮಿಗವ ನೆಗಳೆ?
ಬಿಸಿಲಲ್ಲಿ ಕಾಳಾಹಿ ನೆರಳೀಯೆ ಹೆಡೆಯರಳಿ
ಭೇಕವನು ಕಾದಿರುವ ಹೊಂಚು!
ಘಾತುಕರು ಸಂಧಾನ ತೋರಿ ವೈರಿಯ ಗೋಣ
ಮುರಿಯೆ ಮುಕ್ಕಡೆಗಿಡರೆ ಸಂಚು?

೧೨

"ಬಿಣ್ಣಿಸಿದ ಹೃದಯವಲ್ಮೀಕವನು ಕುತ್ತಿರಿಯೆ
ತಿಣ್ಣ ಸುರಿಗೆಯ ಧಾರೆ ಬೇಕು;
ಸಣ್ಣ ತುರಿಗಜ್ಜಿಗಾದರೆ ಮೂಲಿಕೆಯ ಮದ್ದಿ-
ನೆಣ್ಣೆಯನು ತೊಡೆದರೂ ಸಾಕು.
ಹಮ್ಮಿನೆದೆ ಕುತ್ತಕ್ಕೆ ತುತ್ತಾಗಿ, ಸೊಕ್ಕಿಸಿರ
ತೇಂಕಿ, ಮತ್ತೇರಿದಸಿಗೆಂದು,
ಲಯಬೀಜವನ್ನರೆದು ಹಾಲಾಹಲವನೆರೆದು
ಕುಡಿಸುವುದೆ ಸರಿಯಾದ ಮದ್ದು!

೧೩

"ಧರ್ಮಪುರುಷರನು ಸೆರೆಹಿಡಿಯಲೆಂದಾದರೂ
ಸೋಕಬಾರದು ದೋಷಹಸ್ತ;
ಸಂದಬಾರದು ನಾಡ ಅಭಿಮಾನದುರಿಗೆಂಡ
ದೌಷ್ಟ್ಯದಹನದ ಗುರಿಯ ಹೊತ್ತ
ಬಾನು ಬುವಿ ಸಾಕ್ಷಿ! ವಾಡಿಕೆಯ ಲೋಕೋಕ್ತಿಯಿದು
ನಾನೊರೆದುದನುಭವದ ಖಂಡ!
ಬಾನ ಕಳುಹಿದ ದೂತನಿದಕು ಹೆಚ್ಚಿನ ಮಾತ-
ನಾಡಿ ಕೊಡಲೇ ತಲೆಯ ದಂಡ?"

೧೪

ಕೈಮುಗಿದನಿಂತೆಂದು ಕೃಷ್ಣಾಜಿ ತಲೆಬಾಗಿ
ಕರುಳ ಹುರಿಯನು ಜಗ್ಗಿದಂತೆ.
ಕಣ್ಣಂಚಿನಲಿ ನೀರು, ಮೈಬೆವರು: ಪೆರೆಗಲ್ಲ
ಮೂರ್ತಿ ಕೌಮುದಿಗೆ ಹನಿವಂತೆ!
ಯಾವ ಮೋಹನಮಂತ್ರ ಮರ್ಮವನ್ನೊರೆಯಿಸಿತೊ
ಶಿಲೆಯ ಸಂಧಿನ ಒಸರಿನಂತೆ?
ಕಡಲಿನಾಳಕ್ಕಿಳಿದ ಉಪ್ಪಿನುಂಡೆಯು ಕರಗೆ
ಸೋಜಿಗವೆ? ಬಿದಿರಿ ಕೊಳಲಲ್ತೆ?

೧೫

ಭಾವಸಂಸ್ಕಾರದೊಳೆ ಮಾನವತೆ ಮೈಮೂಡಿ
ಬಾರದೇ? ಹುಳುಕಿರದ ಬೀಜ
ತೇವ ಗೊಬ್ಬರ ನೆಲದ ಕೂಟದಲಿ ಮೊಳೆನೀಡಿ
ತೋರದೇ? ಶ್ರೀಗಂಧ ಭೂಜ
ತೇಯೆ, ನೋಣುರಿ ಸೀಯೆ ತನಿಗಂಪ ತೀಡುವುದು
ತಿರೆಯಲ್ಲಿ ಕಂಡುಂಡ ಸತ್ಯ;
ಚಿದ್ರವಿಯ ಕರಛವಿಯನಾಂತು ಬಗೆಯರಳದಿರೆ
ನರಕವನು ಮಿಗಿಸದೇ ಮರ್ತ್ಯ?

೧೬

ನಿರ್ದ್ರೋಹದುಡಿಯಲ್ಲು ವಿಶ್ವಾಸಮಣಿಯಿರಲು
ಲೋಕವಪ್ಪುದು ನಾಕಬಿಂಬ.
ನಿಶ್ವಸಿಯತಿಯ ವಿಭೂತಿಯ ಮಾರಣಾಹುತಿಯ–
ಕೊಂಬ ಕೆಟ್ಟೆಣಿಕೆಗಳ ಕಂಬ
ಮುರಿಯಿತೆನೆ, ಮಾಯಕದ ಮಂಜು ಮಾಡದ ಮೂಲ
ಜರಿಯಿತೆನೆ, ಸಂದೇಹಜಾಲ
ಹರಿಯಿತೆನೆ, ಕಣ್ಣರಳಿಸಿದ ಶಿವಾಜಿಯು ಹೊತ್ತ
ಕೃಷ್ಣಾಜಿಯುಪಕೃತಿಯ ಸಾಲ!

೧೭

"ಸಂಧಿಗೊಪ್ಪುವೆನೆಂಬ ಚಿನ್ನಹದ ಜೇನ ಸವಿ
ಬಿಂದು ಖಾನನ ಕಿವಿಗೆ ಜಿನುಗಿ
ಗುಂಗೇರುವ್ರೋಲ್ ಹೇಡಿಯೆಂದೆನ್ನ ಹಳಿಹಳಿದು
ನಂಬಿಸಣ್ಣಾ ಗುಟ್ಟು ಗುಣುಗಿ!
ಪುಲ್ಲೆ ಹೆಬ್ಬುಲಿ ಗವಿಯ ಹೊಗಲಳುಕದೇ? ಖಾನ-
ನಿರುವೆಡೆಗೆ ನಾನೆ ಬಹೆನೆಂತು?
ಪೆಳವ ಹಿಮಗಿರಿಯೇರುವಂದು, ಬಡ ಸಾರಂಗ
ಸಿಂಹನೆಡೆ ಸರಿವುದೆದೆಯಾಂತು!

೧೮

"ಹೇಡಿಗಳ ಹೊಳ್ಳೆದೆಯ ಭಾಂಡ ಬರಿದೇ ಬರಿದು.
ಸೋಗದರ ತೋರಿಕೆಯ ಸದ್ದು!
ಬಡ ಶಿವಾಜಿಯು ಹೆದರಿ ಹೆಣವಾಗಿ ಮಣಿದಿಹನು
ಬಡಿವಾರ ಬೆಟ್ಟದಿಂ ಬಿದ್ದು!
ಖಾನನಿತ್ತಭಯ ಸಂಜೀವಿನಿಯ ನೆಕ್ಕಿ, ಸ-
ನ್ಮಾನವೆಂದೇ ತಿಳಿದ ಹುಂಬ,
ಮಾನದುರಿ ಮಸಿಯಾಗಿ, ತಾನೆ ಮುದವಶನಾಗಿ
ಸಾಮಂತಿಕೆಯ ಸಿರಿಯ ಕೊಂಬ!

೧೯

"ಕೊಂಡಿಯೂರುವ ಮೊದಲು ಕೊಳ್ಳಿಯನು ಕೆಂಜೇಳ
ಮುಂಡಾಡದೇ ಮುದ್ದನಿಟ್ಟು?
ಮಿಗದ ಹಕ್ಕೆಯ ಹುಡುಕಿ ತಾನೆ ಹೋಗನೆ ಬೇಡ?
ಗಿಡುಗಗಿದಿರೇ ಗುಬ್ಬಿಯಾದಟು?
ಗಜ ಮೆಟ್ಟಿದೆಡೆ ಸಂದು, ಅಜದ ಗೊರಸಿಗೆ ಒಂದು
ಹೆಂಟೆ ಮಣ್ಣೂ ಹಿಸಿಯದಲ್ತೆ?
ಖಾನನುದ್ದಾಮನೆನ್ನಯ ಡೇರೆಗೇ ಬರಲು
ಬಾನೊಡೆಯ ಬುವಿಗೆ ಬಂದಂತೆ!

೨೦

"ಕವಿಯ ಕೈಯಲಿ ಕೊರಡು ಕೊನರುವುದು, ಮಹಿಮರಂತೆ
ಮುಳುಗಿಸಿದ ಜಲ ಪುಣ್ಯತೀರ್ಥ!
ಅವಧೂತರಮಲ ದೃಷ್ಟಿಯ ಹರಕೆಯನು ಕೊಳ್ಳ-
ದವನ ಜನ್ಮಕ್ಕೇನು ಅರ್ಥ?
ನವ್ಯತೆಯ ನಡೆಗೆ ಹಳಮೆಯ ಹಾದಿ ತೆರೆಯುತಿರೆ
ದಿವ್ಯತೆಯ ನೋಡುವುದು ಮರ್ತ್ಯ.
ಕಾದಿರುವೆನಾ ಖಾನನಾಗಮನಕಾಗಿ! ಕೃಪೆ-
ಯಾನುವುದೆ ನಮಗುಳಿದ ಕೃತ್ಯ.

೨೧

"ಪಾಪಿಗಳನುದ್ಧರಿಸೆ ಪಾವನಾತ್ಮರ ಪುಣ್ಯ
ಗಮಿಸದೇ? ಕತ್ತಲೆಯ ಸೆರೆಗೆ
ಪಾದ ಬೆಳಿಸನೆ ರವಿಯು? ಖಾನನಂಥಾ ಮಾನ್ಯ-
ನಾಗಮನ ಗೌರವದ ಕೊಡುಗೆ!
ನಮ್ಮ ಜನ್ಮದ ಸುಕೃತಿ, ನೆಮ್ಮದಿಯ ಸುಖಶಾಂತಿ-
ಗಳೆ ಖಾನನಾಕೃತಿಯ ತಳೆದು
ಬಿಜಗೈದು ಬಡ ಶಿವಾಜಿಯ ಗುಡಿಲ ಶುದ್ಧಿಸಲಿ
ಭಾಗ್ಯದಲಿ ಬಡತನವನಳಿದು!"

೨೨

ಎನ್ನುತ ಶಿವಾಜಿ ಬಣ್ಣಿಸಿದ ಮಾತನು ಕಿವಿದು
ಖಿನ್ನತೆಯು ಕಳಲಿ ಕೃಷ್ಣಾಜಿ
ಘನ್ಯಭಾವದ ಬಾಸ ಜೆಳ್ಳಿಯಾದನು, ಕಣ್ಣ
ಕೊನೆಯ ಸೌದರ್ಯದಲಿ ಸಿಲುಕಿ.
ಭಾಷಾರ್ಥವನು ದಾಟಿ ಬಗೆಯ ಪದಕವ ನಾಟಿ
ಭಾವ ವೈಢೂರ್ಯ ತೆತ್ತಿಸಿತು
ಮಾನವಿಭೂತಿಯ ಕಾರ್ಯಸೂರ್ಯ ಬೆಳಗದ ಮರೆಯು
ತೋರಲಹುದೇ ತಿರೆಯ ಸುತ್ತು?

## ೨೩

ಕೈಮುಗಿದು ಹೊರನಂಟ ಕೃಷ್ಣಾಜಿ ವೈಕುಂಠ
ದ್ವಾರವನು ಬಿಡುವ ಜಯನಂತೆ!
ದುರ್ಗಸೋಪಾನಗಳನಿಳಿದನಾ ಕೈಲಾಸ–
ವನ್ನಿಳಿವ ವೃಷಭನೆಂಬಂತೆ.
ಸಗ್ಗ ಮುಚ್ಚಿತು, ದುರ್ಗ ಬಾಗಿಲಿಕ್ಕಿತು! ನರಕ
ಪಥವಿಡಿವನೇನು ಪುಣ್ಯಾತ್ಮ?
ಕರ್ಮಲೀಲೆಯ ಕಂಡರಾರು? ಖಾನನ ಬಳಿಗೆ
ನಡೆದ– ಮುಚ್ಚಿರೆ ಹೃದಯಪದ್ಮ.

[ಕದಿರು ನಾಲ್ಕು]

## ೧

ಕೆಸರ ಕುಪ್ಪೆಯ ದೆಸೆಗೆ ಕೇಕಿಯೆನೆ, ಕಟುಕರೆಡೆ
ಕಾರುಣ್ಯವೆನೆ ಕರ್ಮಚಾರಿ ನಡೆದು
ಖಾನನೂರಿದ ಡೇರೆ ಸೇರಿದನು; ಮುಳ್ಳು ಪೊದೆ
ಯನು ಮೊಲ್ಲೆಯಾಧರಿಸಿತೆನಲು ಹಿಡಿದು.
ವರದಿಯೊಕ್ಕಣೆಯ ಕಿವಿಯಲ್ಕೆ ದಳಪತಿ ಮುಖ್ಯ–
ರಿಲ್ಲವರು ಖಾನನಿಕ್ಕೆಲದಿ ಕುಳಿತು
ಕಾದಿಹರು– ಕೃಷ್ಣಾಜಿ ಪಾದಿಯನ್ನೋಲಗದಿ,
ಬೋಧವನು ಸುರಿಯ ಸೊಕ್ಕಿನಲಿ ತೋರಿದು!

೨

ಮತ್ತೇರಿ ಮುಚ್ಚಿದರೆಗಣ್ಣು, ಗಾಂಜದ ಕೊಳವೆ
ಯನ್ನೆಳೆದು ಹೊಗೆಯುಗಿವ ಹೊಲಸು ಬಾಯಿ,
ಹೊದರು ಗಡ್ಡವ ತೀವಿ ಕೆದರು ಮೀಸೆಯ ಸೀವಿ,
ತಲೆತುರಿಸೆ ತೂರಿ ಮಾಲಿದ ತುರಾಯಿ!
ಹೆಡೆಬಿಚ್ಚಿ ತೂಗಿ ನಂಜುಸಿರ ಕಾರುವ ಭೋಗಿ
ಯೋಲ್ ಭಯಾನಕನಾಗಿ ಕುಳಿತ ಖಾನ
ಸತ್ಕೃತಿಯ ಸೊಂಪಿನೆಳೆ ಬೆಳೆಯ ತೊತ್ತುಳಿತುಳಿವ
ಕಾದಿಹ ಕೃತಾಂತನಗಡೆದ್ದ ಕೋಣ!

೩

ಸಭೆಗೆ ಬಂದನು ಕರ್ಮಚಾರಿ ಕೃಷ್ಣಾಜಿಯದೊ-:
ಉಬೆಯೋವರಿಯನುಳಿದ ಕದಳಿಯಂತೆ!
ಕಣ್ಣು ಕಿವಿಯಾಗಿ, ಕಿವಿ ಕಣ್ಣಾಗಿ, ಮೈಯೆಲ್ಲ
ಕಣ್ಗಿವಿಗಳಾದಂತೆ ಮೌನ ಮುತ್ತೆ!
ಉಭಯಸಂಕಟದ ಸುಳಿಯಲ್ಲೊಂದು ಕಾಲು, ಋತ-
ದಭಯ ತಟದತ್ತಣಕೆ ಮನದ ಮಾಲು!
ಕೋಲುಡಿಯದೋಲ್ ಹಾವ ಹೊಡೆಯುವೋಲ್, ವಾಚ್ಯಾರ್ಥ
ಸೂಚ್ಯಾರ್ಥಗಳ ಹೆಣೆದನೆಳೆದು ನೂಲು.

೪

“ಒಕ್ಕಣಿಸೆ ಸನ್ನಿಧಿಯ ಕೊಡುಗೆಯ, ಶಿವಾಜಿ ಬಲು
ಬೆಕ್ಕಬೆರಗಾಗಿ ಕಣ್‌ಬಾಯ್ಬಿಟ್ಟನು;
ಹಾವು ಹತ್ತಿದ ಹಂದೆಯಂತೊಮ್ಮೆ ತತ್ತರಿಸಿ
ಮತ್ತೆ ಸಾವರಿಸುತಲೆ ಕಿವಿಗೊಟ್ಟನು.
ಹೇಡಿಯಾತನ ಬಗೆಯ ಬೆದರು ತರಗಿನ ಮೇಲೆ
ಸಂಶಯದ ಹುಳುವೊಮ್ಮೆ ಹರಿದಾಡಿತು;
ಹುಳುವ ಹಿಂಬಾಲಿಸಿದ ಹುಸಿನೆಚ್ಚಿಕೆಯ ಕೋಳಿ
ಕುಕ್ಕುತ್ತ ನುಂಗಿ ಕೆಲೆದೇ ಬಿಟ್ಟಿತು!

೫

"ನಡೆನುಡಿಯೊಳೇನೊಂದು ಒಡಕು ತೋರದ ಹಾಗೆ
ದೃಢವಾಣಿಯಿಂದ ನಾನೊರೆದ ಮಾತು,
ಬಡ ಶಿವಾಜಿಯ ಬಗೆಯ ಬೆಚ್ಚು ಗುಡಿಲಿನ ಮೇಲೆ
ಬಿಡುಗಡೆಯ ನಂಬಿಕೆಯ ಗುಡಿಕಟ್ಟಿತು.
ಉರುಳಿಸೆಯನೇ ಬಿಯದನೋಡಿ ದಣಿದಾ ಮೇಲೆ
ಸಂದಿಯಲಿ ಸಿಕ್ಕಿರಲು ಹುಲ್ಲಿಗೊರಸು?
ಅಂತೆ ನಾನೂ ಕವಡುಕಣ್ಣಿಯುರುಳನ್ನೊಡನೆ
ನೆಚ್ಚುನುಡಿಯಂತೆಸೆದೆನೊಂದು ಬೀಸು!

೬

"ಹೇಳಿದೆನು– 'ವಿಶ್ವಾಸಘಾತಮತಿ ಖೂಳತನ–
ಗೇ ವಿಾಸಲಾಗಿಟ್ಟ ವಾಮಮಾರ್ಗ;
ತೋಳ ತೀಟೆಯ ಕದನ ಕಂಠೀರವನು ಖಾನ
ಮೆಚ್ಚಿದವನಿಗೆ ಮೂರೆ ಗೇಣು ಸಗ್ಗ!
ಮುಳಿದರೋ ಒಡವುಗಳ ಬೊಮ್ಮ ಬರೆಹದ ಬಂತಿ
ಅಳಿಯಿತೆನೆ ಸಾಕ್ಷಾತು ವಿಲಯರುದ್ರ!
ಒಳಿತು ಸಂಧಾನವನ್ನೊಪ್ಪಿದರೆ, ಗದ್ದುಗೆಯ
ಗೆಳೆತನದ ಭಾಗ್ಯದಲಿ ಬಾಳು ಭದ್ರ'.

೭

"ಕೇಳಿದನು ನೆಮ್ಮದಿಯ ನೆಲದಿ ಬಗೆಯೊರಳಿಯನು
ಹೂಳಿ, ಹೆಬ್ಬುರುಕತನವನ್ನು ಹೋಳಿ,
ಮೊಗವರಳಿ, ಮನಮರುಳಿತಾದರೂ ಧೈರ್ಯದು–
ಯನ್ನು ಹೊತ್ತಿಸದಾಯ್ತು ಹುರುಡುಗಾಳಿ.
ಬಿದರಿಕೆಯ ಬೇವು ಕಾಣದ ಹಾಗೆ ಬಿನ್ನಹಕೆ
ಹದಗೂಡಿ ವಿನಯದ ರಸಾಯನವನು,
ತೋರಿದ ಶಿವಾಜಿ ತಳಿಗೆಯ ತರುಣಿಯೆನುವಂತೆ
ಬಹು ವಿಧೇಯತೆಯೆನುವ ಬಾಯಿನವನು.

೮

"ಗಿರಿ ಬಿಡಾಲದ ಸಸಿಯು ಸುಳಿಯು ಬಲ್ಲದೆ ಬಂಡೆ
ನಿಳಯದಲಿ ಸಾಕಿದ್ದರೂ? ಶಿವಾಜಿ
ಸುಳಿವನೇ ಸ್ನೇಹವನು ನಂಬಿದ್ದರೂ? ಹಂದೆ
ಗಳಿಗೆಗೊಮ್ಮೆ ಸಾವನಲ್ತೆ ಅಂಜಿ?
ಅದಕಾಗಿ ಬೇಡಿದನು— 'ಖಾನರಂಥಾ ಮಾನ್ಯ
ಮಹಿಮರಾಗಮನ ಸೌಭಾಗ್ಯವನ್ನು
ಒದಗಿಸೆ'ಂದೆನ್ನೊಡನೆ! ಬಡವನ ಕುಟೀರಕ್ಕೆ
ಅಡಿಯಿಡಲು ಅಳುಕುವಿರಿ ಎನ್ನಲೇನು?

೯

"ಕೇಸರಿ ಕುರಂಗದೆಡೆ ಕೇಸುರಿಯು ತೂಲದೆಡೆ
ಬೀಸುಬಲೆ ಹಕ್ಕಿಯೆಡೆ ಹೆದರಲೇಕೆ?
ಔಷಧಿಯು ರುಜೆಗಂಜೆ, ಮುಂಜಾನೆಗೇ ಸಂಜೆ
ಮೂಡದೇ? ತಮಗೆ ನಾನೊರೆವುದೇಕೆ?
ಆದರೂ ಮಾತುಗೊಡಲಿಲ್ಲ; ಖಾವಂದರಲಿ
ಹೋದೊಡನೆ ಬಿನ್ನವಿಸಿಕೊಂಬೆನೆಂದೆ.
ಬೇಡಿಕೆಯ ಬೀದಿಯೊಳೆ ಮುಳ್ಳಡಕಿದಂತೆ ನಾ-
ನಾದಿಯೊಳೆ ಹೊಣೆಯಿಂದ ಜಾರಿಕೊಂಡೆ!

೧೦

"ಕಾರ್ಯವಾದರೆ ಸಾಕು, ಕಾರಣದ ಕತವೇಕೆ?
—ಎನ್ನುವುದು ಸಾಧಕರ ಬಲ್ಲಬಳಸು!
ಕಾಡಾಡಿಯೂ ಶಿವಾಜಿಯು ಕಡೆಗೆ ಖಾನರೇ
ಪಾದ ಬೆಳಸುವುದೊಗ್ಗದೆನಗೆ, ಹೊಲಸು!
ನಾಡ ಗಡಿಯಲ್ಲಿರುವ ಗುಮ್ಮವನು ಗೋಣ್ಮುರಿದು
ನಮ್ಮ ಜೋಳಿಗೆಗಿಡುವ ಕಾಲವಹುದು;
ನಾಡಾಡಿಯಾಹ್ವಾನಕಾಗಿ ಹೋದರೆ ಮಾನ
ಬಾಡದೆಂದೂ ಕೂಡ ಬಗೆಯಬಹುದು.

೧೧

“ಕರ್ಪೂರದ ಕೊತ್ತಳದ ಮೇಲೆ ಕಾಮನಬಿಲ್ಲು
ಕೊಂಕಿ ಕಂಡರು ಕಣ್ಣ ಕೋರೈಸದೆ?
ಕೃಪಣನ ಕಲಂಜಿಯನು ಕಮಲಾಲಯೆಯು ತಾನು
ಸೇರಿದರು ಸಿರಿಯ ಗೌರವಕೆ ಕುಂದೆ?
‘ಕಾಡಾಡಿಯುವನೆಂಬ ಕೀಳ್ತನವು ಕುನಿಸಲ್ಲ’–
ಎನ್ನುವಿರಿ ಕೂಡಿರುವ ಕಟ್ಟಾಳ್ಗಳೆ?
ಶುದ್ಧಿಗೂ ಹೊಲೆಯುಂಟೆ?– ಎಂದು ಕೇಳದಿರಣ್ಣ,
ತಿದ್ದಿ ಊದುವೆನೆನ್ನ ತರ್ಕಕಹಳೆ.

೧೨

“ಕುಳ್ಳಸಾತನು ಖಾನನೊಂದು ಕೈಗೆಣೆಯಲ್ಲ,
ಕಂಕುಳಡಿಗೂ ಬರನು; ಕೂದಲೊಂದೂ
ಕೊಂಕದವನಿಂದೆಂಬೆ! ಬಸಳೆ ಬೀಳಿನ ಬಿಲ್ಲ
ಬಾಗಿಗಂಜಲು ಸಲ್ಲ; ಆದರೊಂದು
ಸಂದೇಹ ಶಫರಿ ಸೊಂಡೆಯ ನೀಡಿ ಮೇಲಿದ್ದು
ಶಮೆಸರೋವಾರಿಯನು ಕಲಕುತಿಹುದು!
ಗುಡ್ಡಗಾಡಿನ ಗಂಡಿಗುಂಡಿಗಳ ಪರಿಚಯದ
ಗುಟ್ಟರಿಯೆವೆಂದು ಮನ ಮುಲುಕುತಿಹುದು!

೧೩

“ಶಂಕೆಯೆನೆ ರಾವುಗನ್ನಡಿಯ ನಿಡುನೋಟಕ್ಕೆ
ಸಿಕ್ಕ ಮೂಕನ ಮುಖವಿಕಾರದಂತೆ,
ಮೂಡಿದೊಡೆ ಮೂರಾಗಿ ಮುಸುರಿ ಮೂವತ್ತಾಗಿ
ಕೂಡುವುದು ಕೆಂಜಿಗದ ಹಾರಿನಂತೆ!
ಅಂತೆನ್ನ ಮನದ ಮಾಮರಕೆ ಬಂದಣಿಕೆಯೆನೆ
ಹತ್ತಿರುವುದನುಮಾನವಿಂತು–ಏಕೆ?
ಮಿಕ್ಕವರ ಮಂತ್ರಣವ ಮನದಂದು, ಖಾನರೀ
ಮುಕ್ಕನೆಡೆ ಸಾರೆ ತುಸುವಿರಲಿ ಜೋಕೆ!

೧೪

“ಕಗ್ಗಲ್ಲ ಕಟೆಯಲ್ಕೆ ಮೊಗ್ಗೊಂದು ಚೇಣವೇ?
ಕಕ್ಕಡವನಾರಿಸಲು ಕುಂಟು ನೊಣವೆ?
ಬಗ್ಗಿಸುವ ಪಿಕದೆದುರು ಬೊಂಕು ನರಿಗಾನವೇ?
ಖಂಡಿ ಭಾರವ ಮಿಕ್ಕಲೊಂದು ಮಣವೆ?
ಬಲ್ಲೆನು ಶಿವಾಜಿಯಳವಿಯನಂತೆ! ಖಾನರಿಗೆ
ಹುಲ್ಲೆಣಿಕೆ; ಆದರೂ ಹಗೆಯ ಹಾವು-
ಹಲ್ಲ ಕಳಚಲು ಕೈಯ ತಳ್ಳುವೆಡೆ ಎಚ್ಚರವು!
ಗಾರುಡಿಗರಿಗೆ ಹೇಳಲೇಕೆ ನಾವು?”

೧೫

ಮೊದಲೆ ಮೋರಿದ್ದ ಮದಿರೆಯ ಮತ್ತಿನುಬ್ಬೆಗಕೆ
ಹೊಗಳುಹೆಂಡವ ಹೊಯ್ಯು ಬೆರಸಿ ಬೆರಸಿ,
ಸಂಧಿಯಲಿ ಸಂತರ್ಪಣೆಯ ಗೈಯುವವನಂತೆ
ತಂದ್ರತೆಯ ಕೃಷ್ಣಾಜಿ ಕಲಸಿ ಕಲಸಿ,
ನಡುನಡುವೆ ಕೆಣಕುನುಡಿ, ಒಡನೊಡನೆ ಅಣಕನುಡಿ-
ಗಳನು ಹುರಿಗಡಲೆಯೆನೆ ತಿನಿಸಿ ತಿನಿಸಿ
ಮರೆವಿನ ಮಹಾರ್ಣವದಿ ಮುಳುಗಿಸಿದನಾ ಖಾನ-
ನನ್ನು ಕೈಚಿಟಿಕೆಯಲಿ ಕುಣಿಸಿ ಕುಣಿಸಿ!

* * * *

* * * * *

೧೬

ಅರುವತ್ತನಾಲ್ಕು ಹೆಂಡಿರ ಸರಸಕೇಳಿಗಳ
ಸುರಭೋಗವುಣುತಿದ್ದ ಖಾನನಿಂತು
ಧುರಕೆ ದಂಡನು ಕೂಡಿ ಹೊರಟಿದ್ದ ಘಟನೆಯಿಸ
ವಾರವೊಂದರ ಹಿಂದೆ ನಡೆದ ಮಾತು!
ಬಿಜಪುರದ ಕೋಟೆಕೋಟೆಗಳನೊಂದೊಂದಾಗಿ
ಭುಜಿಸುತ ಶಿವಾಜಿ ಬಲಗೊಳ್ಳುತಿರಲು,
ಎಳೆಯ ಸುಲ್ತಾನನಾಲಿಯ ತಾಯಿ ಹಲ್ಮಸೆದು
ಬಿದಿಯ ಬಟ್ಟಲ ತುಂಬಿ ಕೈಗಿತ್ತಳು!

೧೭

ಬಿಜಪುರದ ಬಿಂಕ ಬಾಂಬಾರಾಣಿಯಾಕೃತಿಯು
ತಳೆದೋಲಗದ ತಂಪುದಾಣದಲ್ಲಿ,
ಕೆಚ್ಚಿನೊಳೆ ಕಟಿದ ಕಟ್ಟಾಳ್ಗಳಿವರೆಂದೆಂಬ
ಹುಚ್ಚುಹುಸಿ ಹೊಂತಕಾರಿಗಳ ನೆರಹಿ,
"ತುಂಡು ತುಡುಗನ ಹೊಡೆವ ಗಂಡುಗಳೆ ಇಲ್ಲದಿರೆ
ಮಿಂಡಿಯರ ಒಳಮನೆಯೊಳಡಗಿಕೊಳ್ಳಿ!
ಖಂಡೆಯವ ಬಿಡಿ; ಕೈಗೆ ಕಂಕಣವ ತೊಡಿ: ಮೈಗೆ
ಕೊಂಡುಡಿರಿ ಸೇಲೆ—ಗಂಡುಡುಗೆ ತಳ್ಳಿ!

ಅಪ್ಪತ್ತನಾಲ್ಕು

೧೮

“ಬಾಳ್ಗೊಡಿರುವ ಬೀರದಾಳ್ತನವು ಬತ್ತಿತೆಸೆ
ಕೂಳ್ಗೋಣಿಯಾದರೇಂ ಬದುಕಿನಿರವು?
ತೋಳ್ಗೊಂಡ ಭುಜಕಲೆಯ ಬಿಟ್ಟು, ತೊಡುಗೆಯ ತೊಟ್ಟು
ತಲೆಬಾಚಿ ಹೂಮುಡಿಯಿರಣ್ಣ ನೀವು!
ಒತ್ತಾಯವೇ? ನಿಮ್ಮನೊತ್ತಿ ಕಳುಹೆವು ಧುರಕೆ
ಆದರೂ, ಎಂತೆಂದು ಹೇಳಿರೊಮ್ಮೆ;
ಮತ್ತಾದರೂ ಶಿವಾಜಿಗೆ ನಾಡ ಗದ್ದುಗೆಯ–
ನೊತ್ತೆಯಿಟ್ಟರೆ ಚೆನ್ನವಡುವೆ ಹೆಮ್ಮೆ!

೧೯

“ಕತ್ತಿಗಾದರೆ ಕೋಶ ಬೇಕು, ಬೆತ್ತಕೆ ಬೇಕೆ?
ಷಂಡರಿಗೆ ಸತಿಯರೆನೆ ಹಿರಿಯ ಕಾಟ!
ಕೈಹಿಡಿದ ಕಾಂತೆಯರ ಕಳುಹಿ ಮರಾಠರಿಗೆ
ಕಲಿಗಲ್ತೆ ಬೇಕು ಕಾಮಿಸಿಯ ಬೇಟ?
ಮಾನವನು ಹುಗಿದು, ಮರ್ಯಾದೆಯನ್ನಗಿದು ತನು
ಹಗುರವಾಗಲು ಶತಾಯುಗಳ ಬಾಳು.”
ಎಂದು ಹೀಗಳೆದೊಡಲ ಬಿಂದಿಗೆಯೊಳುನ್ಮಾದ
ತಪ್ತತೈಲವ ತುಂಬಿ ಜರೆದಿದ್ದಳು.

೨೦

ಮೋನಮೂಟೆಯ ಹೊತ್ತ ಮುದಿಗೂಳಿಗಳೊ, ಹರಣ
ದಂಜಿಕೆಯ ಚಳಿಜರದ ಜಳ್ಳಾಳ್ಗಳೊ?
ಒದ್ದೆ ಹೇನುಗಳೊ, ಹೇಂಟೆಗಳೊ? ನಾಲಗೆಯು ಒಣ–
ಗಿದ್ದ ಬಿಕ್ಕಲ ಭೀರುಗಳೊ? ಪಾಳ್ಗಳೊ?
ಮುಂಡಿಸಿದ್ದರು ಸಭೆಯುಗೊಂಡರಣ್ಯದ ಕಡಿದ
ತುಂಡುಗುತ್ತಿಗಳಂತೆ ಮುಂಡೆ ಬಾಗಿ,
ಬಿಂಡನಫಜುಲ್‌ಖಾನನೊಬ್ಬನೇ ತಲೆಯೆತ್ತಿ
ಕಂಡಿದ್ದನೇ ಕೊಬ್ಬನುಂಡು ತೇಗಿ?

೨೧

ಹಮ್ಮುಹಾವಸೆ ಮತಿಯ ಕೊಳದಿ ಬೆಳೆಯುತಿತ್ತು;
ಬೊಮ್ಮ ಬರಿಕಹದ ಬಂತಿಯಳಿಯುತಿತ್ತು!
ಹೇವಗೆಸರಿನ ಹಳ್ಳದಲಿ ಕಾಲು ಹುಗಿದಿತ್ತು;
ಲಯಸಂಧಿಯಲಿ ಜೀವ ಜೀಕುತಿತ್ತು!
ರಣಚಂಡಿ ರುದ್ರನಾಟ್ಯದ ರಂಗಮಂಟಪದಿ
ಝಣಝರಿನುವ ಗೆಜ್ಜೆಯುಲಿ ತುಂಬುತಿತ್ತು;
ಜನನಾಳುಗಳ ಗೈತಕಿಂಬಾಯ್ತು! ಖಾನನಲಿ
ಜರ್ವುಜ್ಬ್ಬಿ ಮಾತಂದು ಜೃಂಭಿಸಿತ್ತು!

೨೨

'ಪಾಯಸದ ಸವಿಯಣ್ಣನಿಗೆ, ಹುಳಿಯ ತೇಗುಗಳ
ಆಯಾಸವನುಜನಿಗೆ'– ಎಂಬ ನೀತಿ,
ಮಾಯೆಯನು ಗೆಲದ ಮುನಿ ಮಹಿಮನಂದದಿ ನಟಿಸಿ
ಬಾಯ್ಬಲದಿ ಬದುಕನೇ?– ಅಂಥ ರೀತಿ!
ನಂಜುಕ್ಕಿ ಬರೆ ನೀಲಕಂಠಗೆಂದವರೆ, ಸುಧೆ
ಸಂಜನಿಸೆ ಸುರರು ತನತನಗೆನ್ನರೇ?
ಹೆರರ ಮಕ್ಕಳ ದೂಡಿ ಮಡುವಿನಾಳವ ಕಾಂಬ
ಅರರೆ! ಬಾರಾರಾಣಿಯೆಂಥ ಚದುರೆ!

೨೩

ಶಾಕಿನಿಯರೋಕುಳಿಗೆ ಕೆನ್ನೀರ ಹೊಳೆ ಹರಿಯೆ
ಮೇಕೆಗಳ ಗಂಟಲೊಸರಿಡುವ ಚಿಲುಮೆ
ಬೇಕಲ್ತೆ ಮಾರಿ ಭಜಕರಿಗೆ? ಬಾರಾರಾಣಿ
ಬಕುತಳೆನೆ, ಖಾನ ಕುರಿಗೇನು ಕಡಿಮೆ?
ಗದ್ದುಗೆಯ ಗೌರವದ ಕಣಗಿಲೆಯ ಸರದೊಡಿಸಿ,
ಬಿರ್ದು ಬಾಜನೆಗಳನು ಬಡಿದಳಾಹ!
ಮೊದ್ದು ಮುಂದೆಯ ಬಳಗದಂಜಿಕೆಯ ಕಳೆಯಲ್ಕೆ
ಗದ್ದಲದ ಗುಂಗೆನಲು ಕೀರ್ತಿಮೋಹ!

೨೪

ಉಬ್ಬಿದನು ಖಾನ ಕೊಬ್ಬಿದನು, ಗೂಟಕೆ ಗೋಣ
ಬಿಗಿದ ಮಾತಿನ ತೋರಣವನೆ ಮೆದ್ದು!
ಬೊಬ್ಬಿರಿದನೋ ಪೂಣ್ದನೋ? ಜೀವ ದೇಹಗಳ
ಬಿಬ್ಬಿರಿಯಿಸಿದನೊ ಬೆಸುಗೆಯನು ಒದ್ದು?
"ಗುದ್ದಿದಿಲಿಯನು ಗೂಡಿನಲ್ಲಿಕ್ಕಿ ಹಿಡಿತಹೆನು;
ಬಡ್ಡುಗತ್ತಿಗೆ ಸಾಣೆ ಬೇಕು ರಾಣಿ!
ಅಂತೆಯೇ, ಧುರಧೀರರಧಿಕಾರ ಗೌರವಕೆ
ಬೇಕಲ್ತೆ ದಳಪತಿಯ ಪಟ್ಟದೇಣಿ?

೨೫

"ಸವಿ ಮಾವಿನೋಟೆಯೂ ಮರುನೆಲದಿ ಮುಂಗುವುದೆ?
ಮುಗಿಲು ತಂಗಾಳಿಗಲ್ಲದೆ ಮಳೆವುದೆ?
ಕಲಶವಿಡೆ ಸೌಧಕಟ್ಟುವ ಕಾರ್ಯ ಮೊದಲಲ್ತೆ?
–ಬಳಸು ನುಡಿಯಿದರರ್ಥ ತಮಗರಿಯದೆ?
ಸೈನ್ಯ ಸಂದೋಹಗಳ ಸರ್ವಾಧಿಕಾರವಿರೆ
ಸಹಿಸುತಿದ್ದೆನೆ? ಶಿವಾಜಿಯನು ಕಟ್ಟಿ
ಕಟಿದಾಮ ಬಿಗಿದು ಕುಣಿಸೆನೆ? ರಾಣಿಯೋಲಗದಿ
ಭಟರ ಮೋಜಿಗೆ ಕಪಿಯ ನಾಟ್ಯಗೋಷ್ಠಿ!"

೨೬

ಎಂದು ನಿಡುಸುಯ್ದುಗುಳ ನುಂಗಿದ್ದನಾ ಖಾನ
ತನ್ನ ಬಗೆಹಂಬಲವ ಮುಂದು ಮಾಡಿ!
ಮೃತ್ಯುಶಯ್ಯೆಯ ಮೇಲು ಮರ್ತ್ಯಮಾಯೆಯ ಗೀಳು
ಬಿಡುವುದೇ? ಏನು ಈ ಜಗದ ಮೋಡಿ!
ಬೇರ ಬಲ್ಲಳಿಗೆಲೆಯ ತೋರಿದಂತಾಯ್ತೊಡನೆ
ಬಾರರಾಣಿಗೆ ಖಾನನೆದೆಯ ಗುಟ್ಟು.
"ವೀರಾಗ್ರಣಿಯೆ, ನಿನ್ನನುಳಿದಾರು ದಳಪತಿಯ
ಗೌರವಾರ್ಹರು?" ಎಂದಳೆದ್ದು ನಿಂತು.

೨೭

ಮಂತ್ರಿಮುಖ್ಯರ, ಕರ್ಮಚಾರಿಗಳ, ಬೇಹಿಗರ
ಚತುರಂಗ ಬಲಬಲದ ದಳಪತಿಗಳ,
ವ್ಯೂಹತಂತ್ರರ, ಶತಘ್ನಿಗಳ ಸುಜ್ಞರ ನೆರಹಿ,
'ಸರ್ವ ಸೇನಾನಿ ನಾಯಕನು ಖಾನ'-
ಎಂದು ಸಾರಿದ್ದಳಧಿಕಾರ ದಂಡವನಿತ್ತು;
ಯಜ್ಞಾಶ್ವವನು ಪೂಜೆಗೈಯುವಂತೆ!
ಜನ್ಮ ಸಾಫಲ್ಯವಾಯ್ತೆಂದು ಬಗೆದನು ಖಾನ,
ತೊಟ್ಟುಡಿವ ಗುಗ್ಗುಳದ ಕಾಯಿಯಂತೆ!

೨೮

ಸರ್ವ ಸೇನಾನಿ ಪದವಿಯ ಗೌರವವನಾಂತು,
ಭವಭಾರವನು ಹೊತ್ತ ಜೀವಿಯಂತೆ,
ಭವ್ಯಾಂಬರವನುಟ್ಟು ಭೂಷಣಂಗಳ ತೊಟ್ಟು
ಕುಲಿಮೆಯಲಿ ಬೇವ ಬೆಂಗೋವೆಯಂತೆ
ಸಿಂಗರದಿ ಜಗಜಗಿಸಿ, ಎದೆಗುದಿಗೆ ದಗದಗಿಸಿ,
ಜಯದ ಬೇಡಿಕೆಗೆನೆ ಮಸೀದಿಗೆಂದು
ಖಾನ ಬರುತಿರಲವನ ದೂರದೊಳೆ ಕಂಡೊಬ್ಬ
'ಖಾಜಿ' ಕೂಗಾಡಿದನು ಬೆಚ್ಚಿಬಿದ್ದು!

೨೯

...ರುಂಡವಿಲ್ಲದೆ ಬಸಿವ ರಕ್ತಧಾರೆಗೆ ತೊಯ್ದು
ಮುಂಡದೆಡ ಪಕ್ಕದಲಿ ಕರುಳ ಮಾಲೆ
ಜೋಲುತಿರೆ, ಕೈಯ ಕೂರಸಿತುದಿಗೆ ತಲೆಕುತ್ತಿ
ಕೀಲಿಸಿರೆ,- ಅಕಟಕಟ ಮೃತ್ಯುಲೀಲೆ!
ಮೈದಳೆದು ಬಂದಂತೆ ಖಾನನಾಕೃತಿ ತೋರೆ
'ಖಾಜಿ' ಕಂಪಿಸಿ ಚಿಗಿದು ಕಾಲ್ಗೆಟ್ಟನು!
ಕೈಯ ಕಂಗಳಿಗಿಟ್ಟು ಮುಚ್ಚಿ ಗದಗದಿಸಿದನು,
'ಅಯ್ಯಯ್ಯೊ' ಎನೆ ಬಿದ್ದು ಗೋಳಿಟ್ಟನು!

೩೦

ಮೆಲ್ಲ ತಂದಿರೆ ಕಡಲೆ ಹುಲ್ಲು ದುರಿ ಬಿತ್ತೆಂಬ
ಸೊಲ್ಲು ಬಾನನೊಳಂದು ಸಂದುಹೋಯ್ತು!
ನೆಲ್ಲಿಯನ್ನಂಗೈಯ ನಡುವೆ ನಿರುಕಿಸುವಂತೆ
ನಾಳೆ ಬರಲಿಹುದಿಂದೆ ಕಂಡುದಾಯ್ತು!
ಸಾವ ಸಾಕ್ಷಾತ್ಕರಿಸಿಕೊಂಡವನ ಬಗೆಯಂತೆ
ಜೀವವನು ಕುಟುಕುತಿರೆ ಚೇಳು ನೂರು,
ಹಂತ! ಭೀತೋದ್ವಿಗ್ನ ಭೀಮಾರ್ಣವದ ಮೇಲೆ
ಹುಲ್ಲ ತೆಪ್ಪದಿ ಕುಳಿತು ಹೊರಟನವನು!

೩೧

ತಾನಳಿದ ಮೇಲೆ ತಸ್ವಿಯರ ಗತಿಯೇನೆಂದು
ದಾನವ್ಯ ದಯೆಗೊಂಡ ಕಾಮುಪಿಂಡ,
ನೆನೆದನಂತಃಪುರವನುನ್ಮತ್ತ ಕಿರುಬನೋಲ್
ಅರುವತ್ತನಾಲ್ಕು ಅರಸಿಯರ ಗಂಡ!
ಧಾವಿಸಿದನೊಡನೆ ಮರುಳೇರಿ, ದಯಿತೆಯರನ್ನು
ಕಾಣುತುದ್ವೇಗ ಸಂಭ್ರಾಂತನಾಗಿ,
ಬೋನಿನಲಿ ಸೆರೆಬಿದ್ದ ಹೆಗ್ಗಣಕೆ ಕಡೆಯಾಗಿ
ತಿಳಿದನೇ ಸತಿಯರೆನೆ ಕೊನೆಯದಾಗಿ?

೩೨

ಜಟ್ಟಿಗಳ ನಾಲ್ವರನು ಕರೆಸಿದನು; 'ಕೈಕಾಲ
ಕಟ್ಟಿ ಕಂದಕದಲ್ಲಿ ದೂಡಿರಿಂದು
ಭಟ್ಟಿಸಿಯರನು'- ಎಂದು ಕಟ್ಟಾಜ್ಞೆಯನ್ನಿತ್ತು
ಮೃತ್ಯುಮುಮತೆಯ ಮಹಿಮೆ ಮೆರೆದನಂದು!
ಗೋಳಾಟ, ಚೀರಾಟ, ನರಳಾಟ, ಹೊರಳಾಟ,
ಕರುಳ ಕೊರೆವಾಕ್ರಂದ ಮುಗಿಲೇರಿತು!
ಭಿತ್ತಿ ಬಿರಿದಿತ್ತು; ಪೈಶಾಚಕರ್ಮಕೆ ಹೆದರಿ
ಚಿತ್ರಗುಪ್ತರ ಲೆಕ್ಕಣಿಕೆಯದುರಿತು!

೩೩

ಅರುವತ್ತಮೂರು ಹೆಂಡಿರ ಹರಣದುಸಿರುಗಳ
ಹೀರಿಯೂ ಕಂದಕವು ದಳವೇರದೇ?
ಅರುವತ್ತನಾಲ್ಕನೆಯ ನಲ್ಲೆ ತಪ್ಪಿಸಿಕೊಂಡು
ಓಟಕಿತ್ತಳು; ಅಕಟ! ಕೊಲೆಯಾಟವೆ?
ಓಡಿ ಹಿಡಿದರು ಜಟ್ಟಿಗಳು; ಖಾನ ಹೋದೊಡನೆ
ಪತಿಯನ್ನು ಬಿಗಿದಪ್ಪಿ ಗೋಳ್ಗರೆದಳು,
ಕಾಲ್ಹಿಡಿದು ಕಾಡಿ ಬೇಡಿದಳು! ಆದರು ಖಾನ
ಕೆಡೆದೊದ್ದು ಮೆಟ್ಟುತಲಿ ಕೊಯ್ದು ಕೊರಳು

೩೪

ಕ್ರೂರತೆಯ ಕಟ್ಟಡಕೆ ಕಲಶ ಬೇಕೇ ಬೇರೆ?
ಹಿಂಸ್ರಹಾರದ ಪದಕ ಮಧ್ಯಮಣಿಯ
ಹುಡುಕಲೇತಕೆ ಖಾನನಿರೆ? -ಎಂದು ಕೇಳುವಿರೆ?
ನಿಮ್ಮ ಉಪಮಾನಗಳೆ ಹೊಂದವೆಣೆಯು!
ಅಂತನನ್ವಯನಾಗಿ, ಅದ್ವಿತೀಯನೆ ಆಗಿ,
ಹಿಂಸಾತಪೋನಿಧಿಗಳರಸನಾಗಿ,
ಚಿರತೆ ಹುಲಿ ತೋಳಗಳ ಕೊರತೆಯನು ಹೋಗಾಡಿ
ಹೊರಟಿದ್ದನವನಂದು ದಂಡು ಕೂಡಿ!

* * * *

*     *     *     *

೩೫

ಕೃಷ್ಣಾಜಿ ಕೈಚಿಟಿಕೆಯಲಿ ಕುಣಿಸುತಿರೆ ಖಾನ
ಲಯಗತಿಯ 'ಅತಿಭಂಗಿ'ಗಡಿಯಿಟ್ಟನು--
ತನ್ನ ದೈವವನೆ ತೊತ್ತುಳಿ ತುಳಿವ ತಿಲ್ಲಾಣ
ತಾಳಕ್ಕೆ ತಕ್ಕಂತಿರುವ ತಿಟ್ಟನು!
ವಿಕಟಾಟ್ಟಹಾಸದಲಿ ಗಹಗಹಿಸಿ ಹೋಲಿಕೆಯ
ಹೊದರಿಂದ ಹೆಕ್ಕಿದನು ಹೊಳ್ಳುನುಡಿಯ,
"ಜೀವಿ ಜವನೆಡೆ ಬಾರನಲ್ತೆ! ಹೂಹೆ ಶಿವಾಜಿ
ನಾವಿರುವೆಡೆಗೆಯೆಂತು ಕೊಳುವ ನಡೆಯ?

೩೬

"ನೋಡುತಿರು ಕೃಷ್ಣಾಜಿ! ಗೂಡಿಕ್ಕಿ ಹಿಡಿತರುವೆ,
ಕಾಡಕಪಿಯೋಲ್ ಕಟಿಗೆ ಹಗ್ಗ ಬಿಗಿವು!
ನಾಡಾಡಿ, ಸಂಧಾನಕೊಪ್ಪಿದುದೆ ಹೆಚ್ಚೆನುವೆ,
ಬೇಡ, ಬೆದರಿಪುದೇಕೆ ಹಟವನೆಸೆದು?"
ಕುಂಬು ಕಟ್ಟಿಗೆಯ ಮೇಲಣಬೆಯರಳಿತ್ತೆನಲು
ಸಂಭ್ರಮಿಸಿ ಖಾನ ಹೊರಟನು 'ಬೇಟಿ'ಗೆ,
ನಂಬಿಕೆಯ ದೂತನನು ಮುಂದಟ್ಟಿದನು– ಹಣ್ಣು
ಎಟಕದಿರೆ ಕೊಕ್ಕೆ ಬಿಗಿವೋಲ್ ದೋಟಿಗೆ

[ಕದಿರು ಐದು]

೧

ಮಾವಳಿಗಳುತ್ಸಾಹ ಶರಧಿಯ,
ಕುಣಬಿಗಳ ನಿರ್ಘೋಷವೀಚಿಯ,
ಜೀಜಿಯುತ್ಪ್ರೇರಣೆಯ ಹಾಯಿಯ
ನೌಕೆಯೆನೆ, ಗುಡ್ಡಗಳ ಕಿಬ್ಬಿಯ ಕೊರೆದು ದಾರಿಯು ಸರಿಯಿತು!
ಎಲ್ಲಿ ತರುಗುಲ್ಮಗಳ ರುಂದ್ರತೆ,
ಎಲ್ಲಿ ಕತ್ತಲೆ ಹೆಪ್ಪುಗಟ್ಟಿದೆ,
ಎಲ್ಲಿ ಕಣಿ ಕೊರಕಲ ಗಭೀರತೆ,
ಅಲ್ಲೆ ಮರಗಂಡಿಗಳ ಮಧ್ಯದೆ ದಾರಿಯದು ಮುನ್ನಡೆಯಿತು!

೨

ಮರ ಮರದ ಮೇಲಟ್ಟಳಿಗೆಗಳ
ಕಟ್ಟಿದರು! ಪೊದರುಗಳ ಮಧ್ಯದಿ
ತಿಟ್ಟೆಯನ್ನೊಟ್ಟಿದರು! ಬಂಡೆಯ
ಸಂದು ಸೆರೆಗಳ ತೆರೆದು ಮಮ್ಮರೆಗೊಂಡಡಗಿದರು ಕಾಣದೋಲ್!
ದುರ್ಗದಂಚಿನ ಕೆಳಗೆ ಹಂದರ
ಕಟ್ಟಿ, ದಿನ್ನೆಯ ವೇದಿಕೆಯ ಮೇ
ಲಿಟ್ಟು ಪೀಠವ ಪಟ್ಟೆದಿಂಬಿನ,
ರನ್ನಗಂಬಳಿ ನೆಲಕೆ ಹಾಸಿರೆ ಮಂಟಪವು ಚೆಲುವಾಯಿತು.

೭

ಮಂಟಪದ ಸುತ್ತಲಿಗೆ ಮಡಲಿನ
ನಿಂತ ಮದಿಲುಗಳಂತೆ ತಟ್ಟಿಯ
ಕಟ್ಟಿ ಸರಿ ಪದರಾಗಿ, ಪದರಿನ
ನಟ್ಟನಡು ಮೊಳವೆರಡರಂತರ ಬಿಟ್ಟರೆಡೆಯನು ಸಂದಿಯ.
ಸಂದಿಯಲಿ ಸಾಲಾಗಿ ಕೈದುವ
ಕೊಂಡು ಎಂಬತ್ತಾರು ಸಂಖ್ಯೆಯ
ಗಂಡುಗಳು ಸದ್ದಿಲ್ಲದಡಗಿದ
ತೃಷೆಯ ತೋಳಗಳಂತೆ ಕಾದರು ಬರುವ ಕೊಳ್ಳಿಯ ಮಂದಿಯ!

೮

ಕಾಡದಾರಿಯ ಇಕ್ಕಡೆಯೊಳರೆ
ಗಾವುದದ ಗೆಂಟನ್ನು ತಳಿರಿನ
ದಾವು ತೋರಣ ಕಟ್ಟಿ, ಕುಜಗಳ
ಕೊಂಬೆಗಳ ತುದಿಗುಡಿಯನೇರಿಸಿ, ನೆಲಕೆ ಹೂಮಳೆ ಸುರಿದಿರೆ,
ಸಂಭ್ರಮವೆ ಸಿಂಗರವ ಪಡೆದೋಲ್
ಸಿಂಗರವೆ ಸಂಭ್ರಮವ ಮುಡಿದೋಲ್
ಸಂಶಯಕೆ ನಂಬಿಕೆಯ ತೊಡೆದೋಲ್
ಹಮ್ಮೆದೆಯ ಭಾಂಡವನೆ ಬಡಿದೋಲ್ ತುಂಬಿತುತ್ಸವ ತುಳುಕಿರೆ!

೯

ಕಂಡ ಖಾನನ ಕಣ್ಣು, ಮಂಗಲ
ವಾದ್ಯ ಕೇಳಿದ ಕರ್ಣ, ಬಗೆಯಲಿ
ತಂದ ಮನ, ತಾನೆಂಬ ನಿಡುಮೆಯ್
ಅರಳಿ ತೆರೆದುಬ್ಬುತ್ತ ಪುಳಕಿಸೆ ಯಥಾಸಂಖ್ಯೆಯೆ ಯೋಜನೆ?
ದೋಷದಾಹ್ವಾನಕ್ಕೆ ದಂಡವು
ಬೇಸರಿಸಿದರೆ, ವೈನತೇಯನು
ಘಾಸಿಗೊಂಡರೆ ಗರಳದುರುಬೆಗೆ,
ಮನಕೆ ವೀರಾವೇಶ ಮಣಿದರೆ ವಿಷಮವೆನಿಸದೆ ವರ್ಣನೆ?

೧

ಬಡಿದ ನಾಡವರೆದೆಯ ನೆತ್ತರ
ಮಡುಗಳೊಟ್ಟಯಿಸಿದ್ದ ಬಿತ್ತರ-
ಗಡಲ ಧರ್ಮದ್ವೇಷದುಕ್ಕಿನ
ಹಡಗು ಹೊಲೆಗಳ ಹೊತ್ತು ದೈತ್ಯಧ್ವಜವ ಹಾರಿಸಿ ಬರುತಿರೆ,
ಬಾಹುಬಲ, ತಾಯ್ನೆಲದ ಮಕ್ಕಳ
ಕಾಹು, ನಿಸ್ಪೃಹ ಕೃತಿಯ ಮಹಿಮೆಯು
ರೂಹುಗಳು ಸರಿಬೆರೆದ ಹೊಯ್ಲಿನ
ಸಾಹಸದ ಬಿರುಗಾಳಿಯುಬ್ಬರ ವಿಪ್ಲವಕೆ ಹಿಂಜರಿಪ್ಪುದೆ?

೨

ತಾಯಿ ಜೀಜಾಬಾಯಿ ಮಗನಸು
ಹರಸಲೆನೆ ಬಂದಿರೆ, ಶಿವಾಜಿಯು
ಕಾಣದಾಗಲು, ಏನು ಎಲ್ಲಿಹ
ನೆಂದು ಬೆಚ್ಚದೆ ಹೊಕ್ಕಳಂಬಾ ಮಂದಿರಕೆ ತಾ ಬಿಜಯಿಸೆ;
ಕಂಗಳಲಿ ಜಲಧಾರೆ ಹರಿದಿರೆ,
ಮಂಗಳದಿ ಮೈ ಮುಳುಗಿ ನೆರೆದಿರೆ,
ಅಂಗಭಾವವ ಮರೆದು ಕಳೆದಿರೆ
ತುಂಗ ಕೈಲಾಸಕ್ಕೆ ಕಲಶವೆ? ತಪಕಿರೀಟದ ಕುಲಿಶವೆ?

೩

ಮೈದಡವಿದಳು ಮಗನನಾದರು
ಮೈತಿಳಿಯದಾದನು ಶಿವಾಜಿಯು!
ಮತ್ತೆ ಮಾದೇವಿಯೊಲು ಕರೆಯುತ
"ಭಕ್ತನೇ, ವಿಜಯೋದಯದ ಸಾವಿತ್ರನೇ, ಜಾಗೃತಿಛವಿ
ಬಿತ್ತರಿಸು, ತಮದೊಡ್ಡ ಜಾಲಿಯ
ಕತ್ತರಿಸು, ದುರ್ದೈತ್ಯರಾಳಿಯ-
ನಪ್ಪಳಿಸು, ಕುಲಧರ್ಮದೀಪ್ತಿಯ-
ನೆತ್ತಿ ಬೆಳಗಿಸು" ಎಂದಳಂಬಾ ಮಾತೆಯೆನೆ ವರದಾನಕೆ.

೯

ಮನದ ಚಕ್ಷುವಿನೆದುರು ಅಂಬೆಯು
ಮುಂದೆ ಮೂರ್ತಿಭವಿಸಿದಬ್ಬೆಯು
ಒಡನೊಡನೆ ಮೈಯಾಂತು ಸಿಂದೊಲು
ಭಾಷಿಸಲು ಮೈತಿಳಿದು ಕಣ್ದೆರೆದನು ಶಿವಾಜಿಯು! ಪ್ರಳಕದ
ವಜ್ರಲೇಪ್ಯದಿ ಮೈಯು ಮಿಂದೋಲ್,
ಮಿಂಚಿನಟ್ಟದಿ ಮನವು ನಿಂದೋಲ್,
ನವ್ಯಚೇತನ ನಲಿದು ಬಂದೋಲ್
ತನುವಿನುಬ್ಬಿಕೆ ಹುರುಡು ಹಬ್ಬಿಕೆ ಎದ್ದಿತೂಹೆಗೆ ನಿಲುಕದ!

೧೦

ತಾಯ ಪದರಜದಲ್ಲಿ ತಲೆ ಮಣಿ-
ದಿರುವ ತನಯುನನೆತ್ತಿ ಸವರುತ
ತಬ್ಬಿ ತಲೆ ಮುಂಡಾದಿ ಜೀಜೆಯು–:
"ಕಂದ, ಬಿಡು ಸಂದೇಹ! ದೇವಿಯ ಕೈಯ ಕೂರಸಿಯಾಗುವೆ!
ನೋಂತಿಹೆನು ನಿರಶನದ ನೋಂಪಿಯ-
ನೇಳು ದಿನದಿಂ ನಿಯಮ ನಿಷ್ಠೆಯ!
ದೇವಿ ಚಿನ್ಮಯೆಯಾಗಿ ನಿನ್ನೆಯ
ನಡುವಿರುಳು ವರವಿತ್ತಳೆ"ನ್ನುತ ಬೆಂದಡವಿದಳು ವತ್ಸಲೆ!

೧೧

ಕಿರುನಗೆಯು ಕೇವಣಿಸೆ ಮೊಗದಲಿ,
ಕಣ್ಣ ಕೊನೆಯಲಿ ಪುಣ್ಯವಾರಿಯ
ಕಣವುದುರೆ, ಕಡುಕೆದರಿ ಕಲಿತನ
ಕಿಚ್ಚಿನೋಲುರಿದೇಳೆ ಜಗ್ಗನೆ ತೋಳೆ ವಿಸ್ಫುರಿಸಿತ್ತೆನೆ,
ನೆಚ್ಚು ನೆಲೆಗೊಂಡಿತು ಶಿವಾಜಿಗೆ
ಜೀಜೆಯುಕ್ಕಿನ ಕವಚವನ್ನೆದೆ-
ಗೊತ್ತಿ ತೊಡಿಸಿರೆ, ತಲೆ ರುಮಾಲಿನ
ನಡು ಕುಲಾವಿಯನಿಟ್ಟು ಕಿಗ್ಗಟ್ಟಿನ ಕಠಾರಿಯ ಬಿಗಿದಿರೆ!

೧೨

ನಾವು ಹಸ್ತಾಂಗುಲಿಯ ಮಧ್ಯದಿ
'ವ್ಯಾಘ್ರನಖ'ವಾಯುಧವ ಬಿಗಿದಳು!
ಭಾರ್ಗವನ ಕಲಿ ಕಾರ್ತವೀರ್ಯಾರ್ಜುನ
ಕದನ ಕೋಲಾಹಲಕೆ ಕಳುಹುವ ಕೊಡಲಿರಾಮನ ತಾಯಿಯೆ?
ಭವ ಕುಮಾರಸ್ವಾಮಿ ತಾರಕ-
ವಧೆಯ ಸಿದ್ಧಿಯ, ವರದ ಬುದ್ಧಿಯ,
ಶಿವೆಯ ಕೃಪೆ ಕೊಳ್ಳುವನೆ? ಜೀಜೆಯ
ಕುವರನಿಗೆ ಕರ್ತವ್ಯನಾವೆಗೆ ತಾಯ ಹರಕೆಯ ಹಾಯಿಯೆ?

೧೩

ಬರಿಸಿ ಭಟಮುಖ್ಯರ ಶಿವಾಜಿಯು
ನೆರಹಿದನು — ತಾರಗೆಯ ತಳಿಯಲಿ
ಪೆರೆಯು ತನ್ನಂಶುವಿನ ಬೆಳಕನು
ಇರಿಸಲೆನೆ, ತಾಯ್ನಾಡ ರಕ್ಷಣೆಹೊತ್ತ ಹೊಣೆಯೊಪ್ಪಿಸಲೆನೆ!
ಭಾವ ನಿರ್ಭರತೆಯಲಿ ಹೃದಯದ
ಭಾಂಡ ತುಂಬಿರೆ, ಕೊರಳ ಗದ್ಗದ
ಭಾರ ಬಲಿದಿರೆ, ಕೈಯ ಸನ್ನೆಯ
ತೇರಿಸಲಿ ನುಡಿಯೇರಿ ಹೊರಟಿತು ತಡೆದು ತಡವಾಗಿ!

೧೪

"ಸೋದರರೆ, ನೆಲತಾಯೊಲೀ ಮಾ-
ತಾಯಿ ನಿಂದಿಹಳೆಂದು ಬಗೆವೆನು!
ಬರುವ ಭಾವಿಯ ಬಸಿರು ಹೊತ್ತಿಹ
ಭುವನವಾರಿಗೆ ಗೊತ್ತು? ಬೇನೆಯು ಕುತ್ತು ಕಾಣಿಸಿಕೊಂಡಿದೆ!
ಮಣಿವನೇ ನಿಮ್ಮಕ್ಕರೆಯ ಸೊದೆ
ಯನ್ನು ತಣಿಯುಂಡೀ ಶಿವಾಜಿಯು
ಮಸಿಮುಸುಡ ತೋರುವನೆ? ಮಲೆತರೆ
ಮುರಿವುದೊಂದೇ ಗೊತ್ತು ದೇಹಾರ್ಪಣದ ಭಾಗ್ಯವು ಬಂದರೆ!

೧೫

"ಫಲಿಸದಿರೆ ಸಂಧಾನ, ಖಾನನ
ಕುಹಕ ಕಾಳಿಗೆ ಬಲಿಯು ಸಂದರೆ,
ನೆಲದ ಋಣಭಾರವನು ಹೊರಿಸುತ
ಕಳುಹದಿರಿ ನನ್ನನ್ನು! ಪರವೂ ಹೇಸಿ ಬಾಗಿಲ ಬಿಗಿವುದು!
ಹೊತ್ತೆವೇ ಸ್ವಾತಂತ್ರ್ಯ ರಾಜ್ಯದ
ಗುರಿಯ? ಧರ್ಮದ ಸಿರಿಯ- ಹುಟ್ಟಿನ
ಹೊರೆಯ ನಡು ಹುರುಳಾಗಿ ಕಟ್ಟಿರಿ!
ಕೊನೆಯ ಕೋರಿಕೆ, ಬಿನ್ನಹದ ಸಂದೇಶವಿನಿತೇ ಎನ್ನದು!"

೧೬

ಕೇಳಿ ಕಟ್ಟಾಳುಗಳು ಕಿವಿದೆರೆ
ಸೀಳಿ ಸುಡುಸೀಸವನು ಸುರಿದೋಲ್
ತಾಳದಾದರು! ಜೀಜೆಯಡಿಗಳ
ಫಾಲದಲ್ಲೊರಸುತ್ತ ಪೂಣ್ಕೆಯ ನುಡಿಯ ತೊಟ್ಟರು, ದಿಟ್ಟರು!
"ಹೇಳಲಾಗದು ಕೆಡುನುಡಿಯನೋ
ಭಾಳನೇತ್ರನೆ, ಕೂದಲೊಂದೂ
ಕೀಳದಂದದಿ ಕಾದು ನಿಲುವೆವು;
ಕಡಿಯುವೆವು ಮಡಿಯುವೆವು, ಕಾಯದ ಹೋಳು ಮಾನದ ಬಾಳೆನೆ!"

೧೭

ವರದ ಮುದ್ರೆಯ ಜೀಜೆ ಕರಗಳ
ನೆರಡನೂ ಮೇಲೆತ್ತಿ ಘೋಷಿಸೆ
'ಹರಹರಾ ಮಾದೇವ'ದಲೆಗಳು
ಪರಿದಿ ವಲಿವಲಿಯಾಗಿ ಗಾಳಿಯ ಮೈಯ ಚಂಗಿಸಿ ಸರಿಯಿತು.
ಸುತ್ತು ಪರಿಸರದಲ್ಲಿ ಜಡ ಚೇ-
ತನ ನಿಸರ್ಗದ ನಡುವೆ ಮಿಂಚಿನ
ಹೊಂಚು ವಿಸ್ಫೂರ್ತಿಯನು ಹೊಳಹಿಸೆ
ಕೆಂಚು ಮೂಡಣ ಬಾನ ಕರೆಯಲಿ ಹರನ ಹೆಸರನೆ ಬರೆಯಿತು.

೧೮

ತೂಗಿ ತಲೆ ತಾಟಾಡಿ ತಾಳೆಯ
ಪೂಗ ತೊನೆದಿರೆ, ಕಾಡುಬಾಳೆಯ
ಬಾಗು ಹೆಚ್ಚಿರೆ ಗೊನೆಯ ದೆಸೆಗೇ,
ಸಾಗಿ ಸುಟ್ಟುರಿ ಗುಟ್ಟಿನೆಣ್ಣೆಯ ಕಾಡ ಕಿವಿಗವಿಗೆರೆದಿರೆ,
ಮೂಡಿದನು ಮುಂಜಾನೆ ನೇಸರ!
ನೋಡಿ ಒಂದೇ ಇರುಳಿನಂತರ-
ದಲ್ಲಿ ಮಾಡಿದ ಸಜ್ಜುಗಳ ಬೆರ-
ಗಾಗಿ ಕೆನ್ಮೊಗ ಕಳೆಗೆಡುತ ಬಿಳಿಚಿದನೆ ಬೆಕ್ಕಸವಡೆದಿರೆ?

೧೯

ಹದ್ದುಗಳು ಹಾರಿದವು ಮುಂಬಹ
ಬಿರ್ದಿನೂಟದ ನಿರಿಕೆಯೆನೆ, ಮರು
ಳಿದ್ದವೊಲು ಡೇಗೆಗಳು ಕಿಳಿರಲು,
ತಿದ್ದಿ ಬರೆವುದೆ ವಿಧಿಲಿಪಿಯ ಬಂತಿಗಳ ಮಾರುತ ಫಲಕದಿ
ಸುಳಿವ ವಾಯಸವೃಂದ ಪದಗಳ
ಪಂಕ್ತಿಯಲಿ ಗೆರೆಕೀರಿ? ನರಿಗಳ
ನಟನೆಗಿಂದೇ ಹೊತ್ತೆ? ಕುಪ್ಪುಳ
ಹಕ್ಕಿಗಳು ಗುಬ್ಬುಳಿಪುದೇತಕೆ? ಯಾರ ದುಸ್ಸಂಕೇತಕೆ?

[ಕದಿರು ಆರು]

೧

ಖಾನ ಹೊರಟನು 'ವಾಯಿ ಹಳ್ಳಿ'ಯಲಿ ತಂಗಿದ್ದ
ಸೇನೆಗಳ ಸಂದಣಿಯ ಕೂಡಿ- ಪಾಲಕಿಯೇರಿ!
ಆನೆ ಕುದುರೆಯ ಒಂಟೆ ತೇರುಗಳ ಕಾಲಾಳ
ಚೂಣಿಯೆಡಬಲದಲ್ಲಿ ಮೇಳವಿಸೆ ಮೆರವಣಿಗೆ-
ಕಡಲ ದಂಡೆಯ ಮಳಲ ಮಧ್ಯದಲಿ ಹೂತಿಟ್ಟ
ಹುಡುಕುಗಂಟಿನ ನೆಲೆಯನರಸೆ ಮಕ್ಕಳ ಕೂಟ
ಸಡಗರದೊಳುರವಣಿಸುವಂತೆ- ಮುಂಬರಿಯುತಿದೆ!

ಕೊಂಬು ಕಹಳೆಗಳು ಮೊಳಗಿದವು ಖಾನನ ಬಲದಿ;
ನಂಬಿಕೆಯ ನಾಟ್ಯರಂಗದ ನಾಂದಿಪೂಜೆಗದೊ,
ಅಂಬರಧ್ವಾನವಾಯ್ತೆನೆ ಶಿವಾಜಿಯು ಮೂರು
ತುಂಬು ತೋಪುಗಳ ಹಾರಿಸಿ ಗೌರವವನಿತ್ತು
ಸ್ವಾಗತವ ಘೋಷಿಸಲು, ಕೇಳಿ ಖಾನನ ಕಿವಿಯು
ಬೀಗೆ, ಕರ್ದುಟಿಯರಳೆ ಕುಳಿಕದಂಷ್ಟ್ರಗಳಂತೆ
ತೋರಿದವು ಕೊಳಕು ಹಲ್ಲುಗಳು! ಬಗೆ ಬೆಬ್ಬಳಿಸೆ,
ಖಾನ ಮತ್ತೊಂದು ಬಟ್ಟಲ ಮದಿರೆಯನ್ನೊಡಲ
ದೋಣಿಗೆರೆದನು- ಅಕಟ ದಡಗೊಂಬ ಮುಮ್ಮೊದಲಿ
ಅಂಬಿಯಲಿ ನೀರ್ತುಂಬಿಕೊಳ್ವ ವಿಭ್ರಮಿಯಂತೆ,
ತನ್ನ ಬೇರಿಗೆ ತಾನೆ ಬೆನ್ನೀರನೆರೆವಂತೆ!

ಧೃತಿಗೆಟ್ಟ ಅಳ್ತನಕೆ ಮದವೊಂದೆ ವೀರತನ-
ವಾಗಿ ತೋರುವುದಚ್ಚರಿಯೆ? ಮರಳುಗಾಡಿನಲಿ
ಹರುಳುಗಿಡ ಮರವೆಂದು ಮೆರೆಯೆ ಚೋದ್ಯವೆ? ಯುಕ್ತಿ-
ಯಳಿದಾಗ ಕೊಂಕು, ಮತಿ ಮರೆದಾಗ ಮಂಕುಗಳು
ಸಾಜವಲ್ಲವೆ? ಖಾನ- ಚೊಬ್ಬುಳಿಗೆ ಕಬ್ಬಿಣದ
ಕಟ್ಟಿಕ್ಕುವವನಂತೆ, ಒಡೆದ ಮಡಕೆಗೆ ಮಣ್ಣ
ಮೆತ್ತಿಕ್ಕುವವನಂತೆ, ಕಡಿವ ತಂತಿಯ ಸಂದ-
ನಂಟಿಕ್ಕುವವನಂತೆ, ಚಾಂಚಲ್ಯಕಚಲತೆಯ
ಗಂಟಿಕ್ಕುವವನಂತೆ ನಾಡಿನಾಡಿಯ ನಡುವೆ
ಕಳುಹಿದನು ಮತ್ತತೆಯ ಮತ್ಕುಣಗಳನು ಬಿರ್ದಿ-
ಸುನ್ಮಾದದಲಿ ಮೆರವಣಿಗೆಯುಂ ಮುಂಬರಿಯುತಿರೆ!

ಮಲ್ಲತನದಲಿ ಮಿಕ್ಕ ಹೆಸರಾಂತನಪ್ರತಿಮ
ಯೋಧ 'ಸಯ್ಯದ್ ಬಂದ'ನೆಂಬ ಜಟ್ಟಿಯದೊಬ್ಬ,
ಖಡ್ಗಪ್ರಹಾರದಲಿ ದಿಗ್ದಂತಿಗಳ ಕರ್ಣ
ಪಟಲ ಪರಿಯುವ ಯಶೋದುಂದುಭಿಯ ಮೊಳಗಿಸಿದ
ಖ್ಯಾತಿವೆತ್ತಾ 'ಕರೀಂ ಖಿಲ್ಜಿ'ಯದೊ ಮಗುದೊಬ್ಬ,
ಕೈದುಗೈಯವರಾಗಿ, ಕುದುರೆಯೇರ್ದವರಾಗಿ,
ಜೃಂಭಿಸುವ ಕಾಳೆಗದ ಕಲಿಗಳೂ ಹಲಮಂದಿ
ಡೊಂಬಿಯಲಿ ಖಾನನಿಕ್ಕೆಲ ಹಿಂದು ಮುಂದಿನಲಿ
ಅಂಗರಕ್ಷಕರು- ಮುಂಬರಿಯುತಿರೆ ಮೆರವಣಿಗೆ!

೨

ಭೋರ್ಗರೆವ ಸಾಗರದಪಾರ ಜಲರಾಶಿಯಲಿ
ಕಾಣದೆಡೆಯಲ್ಲಿರಲುಬಹುದೆಂದು ಕಲ್ಪಿಸುವ
ದ್ವೀಪವನ್ನೊಂದನ್ನರಸಿ ತೆಗೆವ ಜೀವನ್ಮರಣ

ಸಾಹಸಾಪಾಯ ಕೋಟಿಯ ಗರ್ಭವನು ಹೊಗುವ
ಘನಶೋಧಕನು– ಮಿದುಳ ವಿಕೃತಿಯೆನೆ– ನೆಚ್ಚಿಕೆಯ
ನೆಮ್ಮಿ ನಡೆವನು ಮುಂದೆ ಮುಂದೆ! ಜನಬೊಬ್ಬೆಗೆ
ಬಾಳ್ವೆಯನೆ ಬೇಳ್ವವಗೆ ಬದಲು ಭಯವಿನ್ನೆಲ್ಲಿ?
ವಿಶ್ವಸಂಪುಟದ ಇತಿಹಾಸದಧ್ಯಾಯದಲಿ
‘ಮಾನವ ಮಹಾತ್ಮೆ’ಯುಪಶೀರ್ಷಿಕೆಯ ಅಡಿಯಲ್ಲಿ
ಏಕೈಕನೆನೆ ತನ್ನ ನಾಮದುಲ್ಲೇಖದಭಿ-
ಮಾನವನು ತಳೆಯುವ ಮಹತ್ವದಾಕಾಂಕ್ಷೆಯಲಿ
ಮರುದೊತ್ತಿ, ಹಾಯಿದೋಣಿಯ ಹತ್ತಿ, ಹರಣವನು
ಹುಲ್ಲೆಣಿಸಿ ಜಲಯಾನಕೆಂದು ಮುಂಬರಿಯುವನು!...
ಹರಿಗೋಲು ಕಿರುದೋಣಿಗಳ ಕೊಂಡು ಬೆಂಬಲಕೆ
ಬೆಂತರದ ನೆರಳ ಕಂಡಗಿದ ಬೆಪ್ಪುಗಳಂತೆ,
ಬೆದರಿದೆದೆಯೊಳನುಚರರ ಬಳಗ ಹಿಂಬಾಲಿಪುದು!...
ಆದರೂ ಮುಂದುವರಿದಂತೆ ಕಾಣುವುದೇನು?
ಮೇಲಿಂದ ನೀಲಿಮಾಕಾಶ!... ಸುತ್ತಲು ಕೆಳಗೆ
ನೀಲ ನೀರಧಿಯ ನಿರವಧಿಯ ವಿಸ್ತಾರದಲಿ
ನಿಸ್ಸೀಮ, ನಿರುಪಮದ ನಿರ್ಘೋಷದಾಭೀಳ
ಹೃದ್ಭೇದನೋತ್ಪಾತ ದೃಶ್ಯಗಳು!... ಅನುಚರರ,
ಅಂಜಿದೊಡನಾಡಿಗಳ ಬೇಡೆನ್ನುವೊಕ್ಕೊರಲ
ಬೇಡಿಕೆಯ ಕಿವಿಗಿಳಿಸಿ ಶೋಧಕನು ಮುಂಬಯಣ
ತಡೆವನೇ? ಸಾಹಸದ ಗರಿಮೆ, ಕೀರ್ತಿಯ ಹಿರಿಮೆ,
ಮನುಜತೆಯ ಮಿಗುವ ಘನಮಹಿಮೆ ಮುಪ್ಪುರಿಯಾಗಿ
ಹೆಣೆದು ಹೆಕ್ಕಳಿಸುತುನ್ಮಾದಭರ ವೀಚಿಯಲಿ
ತೇಲಿಸುವುದಾತನನು!... ಹಾಯಿದೋಣಿಯ ಗತಿಯು
ನಿಲದೆ ಹಾದೇ ಹೋಗುವುದು ಮುಂದೆ ಮುಂದೆ! ಅನು-
ಚರರು ಬಂದೇ ಬರುವರಲೆ ಹಿಂದೆ ಹಿಂದೆ– ಬಲು
ಬಿರುಗಾಳಿ, ಹೆಬ್ಬಂಡೆ, ಭೀಮ ನಕ್ರಾದಿಗಳ

ಶಂಕೆ, ಸಂದೇಹ, ತತ್ತರಿಕೆಗಳ ಬಡಿಗೋಲು
ಎದೆಗುಡಾಣವ ಬಡಿದು ಢಣಢಣಿಸಿದರು, ಹರಣ
ರಣರಣಿಸಿದರು,– ಪಯಣದಲಿ ಅನಿಶ್ಚಿತ ಪಥದಿ!

ಭೂಶೋಧಕನು ಖಾನ; ಅವನೇರ್ದ ಪಾಲಕಿಯು
ಪಾಯುಂಬಿಗುಪಮಾನ; ಪಯಣ ಪ್ರತಾಪಗಡ
ದೆಸೆವಿಡಿದು ಮೆರವಣಿಗೆಯಲ್ಲಿ ಮುಂಬರಿಯುತಿದೆ!

ವ್ಯಾಘ್ರವೊಂದಿದೆ ನಾಡನಳ್ಕಿಸುತ; ಹೊಂಚಿನಲಿ
ಬಿಯದರಾಣ್ಮನ ಮನೆಯ ಕೊಳ್ಳೆಯನೆ ಕಬಳಿಸಿದೆ!
ಶಬರಾಳಿ ಬೆಚ್ಚಿತ್ತು; ಶೈಥಿಲ್ಯ ಹೆಚ್ಚಿತ್ತು;
ಬಲೆ ಬಿಲ್ಲುಬಾಣ ನಾಚಿತ್ತು! ಹುಲು ಹಕ್ಕಿ ಮಿಗ
ಕೊಲುವ ಬೇಡರ ಬೀರದೆದೆ ಬೆಸುಗೆ ಬಿಚ್ಚಿತ್ತು!
ಭಿಲ್ಲರೊಡೆಯನು ಹೊಂತಕಾರಿಯೊಬ್ಬನ ಬೆಸಸೆ,
ಹುಮ್ಮಸಕೆ ಕಳ್ಗುಡಿದು, ಮರುಳನ್ನೆ ಹುರುಳೆಂದು,
ಅಂಕದಲಿ ಕೊಂಕೇರಿ, ಬಿಂಕದಲಿ ಮುಂಕೇರಿ,
ಹೊಗಳು ತಮ್ಮಟೆಯ ಸುಸ್ವರಕೆ ಕಿವಿಯಡವಿಟ್ಟು,
ವ್ಯಾಘ್ರವಿಧ್ವಂಸ ಕಾರ್ಯಕೆ ಪೂಣ್ದು ಪಣತೊಟ್ಟು,
ಹೊರಡುವನು ಆ ಹೊಂತಕಾರಿ ಪಡೆಯನು ಕೂಡಿ!...
ಪಡೆಯ ಪಿರಿಯನ ಪೆಂಗತನಕೆ ನಗುವರು ಕೆಲರು,
ಕಡುಗಲಿತನಕ್ಕೆ ಮನಸೋತು ಸಿಗುವರು ಕೆಲರು,
ಉದ್ದೇಶದೊಳ್ಳಿತಿಗೆ ಹಿಗ್ಗಿ ಮಿಗುವರು ಕೆಲರು,
ಆದರೂ ಆತನನೆ ಮುಮ್ಮಾಡಿ ಬೆಂಬಲಿಸಿ
ಗವಿಗೊಂಡ ಬಗ್ಗವನು ಬಲೆ ಬೀಸಿ ಹಿಡಿಯಲ್ಕೆ
ನಕ್ಕವರು ಸಿಕ್ಕವರು ಮಿಕ್ಕವರು ಹೊರಡುವರು!...

ಗವಿ ದುರ್ಗವಾ ಶಿವಾಜಿಯು ಬಗ್ಗ, ಬಿಜಪುರದ
ಪಡೆ ಶಬರರೌಘ, ಖಾನನು ಹೊಂತಕಾರಿಯೆನೆ
ಮುಂಬರಿಯಿತಾ ಮೆರವಣಿಗೆಯು ಮಾಂಕರಿಸುತ್ತ

೩

ಸಂಧಿಮಂಡಪದ ನೂರಾರು ಮಾರಿನ ದೂರ
ವಂದಿಗೆಯನಿಳಿದನಾ ಖಾನ! ಕಾಲ್ನಡೆಯಿಂದ
ಮುಂಬರಿಯೆ, ಕಂಡನು ಶಿವಾಜಿ ಕೋಟೆಯ ಮೇಲಿ-
ನಿಂದ! ಕೆಟ್ಟಿತು ಕೆಲಸವೆಂದು ಬಗೆದನು ಮನದಿ!
'ಅಪ್ರಮಾದವೆ ಅಮೃತಪದವೆಂದು, ವಿಧಿಯೊಲಿದ
ಮಾನವನೆ ಕಲಿಯೆಂದು ಮಲೆತೊಡನೆ ಬಲಿಯೆಂದು,
ವಿನಯದಲಿ ಶೌರ್ಯವನು ದಾನದೆ ಕದರ್ಯವನು
ಗೆಲ್ಲುವುದೆ ಸರಿಯೆಂದು'– ತಿಳಿದು ದೂತನ ಕರೆದು
ಕಿವಿಗುಟ್ಟನೊರೆದಟ್ಟಿದನು! ಕಪಟಸಾಮಗ್ರಿ-
ಯೆಡೆ ಕೃತಕವಿಶ್ವಾಸವೆನೆ, ಮೋಸಗೈತದೆಡೆ
ವಿನಯವೆನೆ, ಕಾರ್ಪಣ್ಯದೆಡೆ ಮೋಹವೆನೆ ದೂತ
ಹಯವೇಗವಿಮ್ಮಡಿಸಿ ಖಾನನೆಡೆ ಧಾವಿಸಲು,
ಬರುವ ದೂತನ ಕಂಡು ಗುರುಗೌರವವನಾಂತು
ಖಾನ ನಿಂದನು; ನಿಲಿಸಿದನು ತನ್ನವರನಲ್ಲೆ!

ಕೂಗು ಸದ್ದುಗಳನ್ನು ಕೊಂಬುಗಳು ಭೇರಿಗಳು
ಗಂಟಲೊಡಲುಗಳಲ್ಲೆ ನುಂಗಿ ಹುದುಗಿಟ್ಟು, ಬಲು
ಬಾಗಿ ಬೀಗಿದವೆನಲು, ನಿಃಶಬ್ದದಜಗರವು
ಸರ್ವ ಸೇನೌಘವನೆ ನುಂಗಿದೋಲ್, ನೀರವದ
ಚಿತ್ರಗತ ದೃಶ್ಯವೆನೆ ಮೌನನಾವರಿಸಿತ್ತು!

ದೂತ ಕೈಮುಗಿದು ಬಿನ್ನವಿಸಿದನು ಖಾನನಲಿ-:
“ಸನ್ನಿಧಾನಕೆ ಶಿವಾಜಿಯ ಅರಿಕೆ, ಬಿನ್ನಹಕೆ
ಬಾಯಳಿದು ನಿಂದಿಹೆವು ನಿಸ್ಸಹಾಯಕರಾಗಿ!
ಆದರೂ, ತಾಯಿ ಮೊಲೆಯೂಡುವಳೆ ಮಗುವಳದೆ?
ಲೆಂಕ ಬೇಡದೆ ದಾತನೌದಾರ್ಯ ಮೂಡುವುದೆ?
ಶಂಕಿಸದೆ ತರ್ಕದಲಿ ನಿಶ್ಚಲತೆ ಕೂಡುವುದೆ?
ಬದ್ಧಾಂಜಲಿಗೆ ಮಾತ್ರ ಭಗವಂತನೂ ವರದ-
ನಾಗುವನು! ನಮ್ರಯಾಚನೆ ವಲ್ಲಿಂಗೆ ವೀರ
ವಿಕ್ರಮದುಮ್ರಮವೊಂದೆ ಅನಿಕೆಯು! ತಮ್ಮೊಡನೆ
ರಕ್ಷಣೆಯ ನುಡಿಯೊಂದೆ ಬೇಡಿಕೆಯು! ನಿರ್ಭಯದ
ಭಿಕ್ಷೆಯನು ದಯೆಗೈಯೆ ಕೋರಿಕೆಯು! ಮಾಣಿಕನ
ಕೆಂಗೆಂಡವೆಂದು, ಸುಮಹಾರವನು ಹಾವೆಂದು
ಚಂಗಿಸನೆ ಹೇಡಿ? ಬೆಳ್ದಿಂಗಳಿಂಪಿಗೆ ರೋಗಿ
ಭಂಗವಡೆಯನೆ? ಅಂತೆ- ಬಡ ಶಿವಾಜಿಯ ಚಿಂತೆ!
ಕಂಗೆಟ್ಟಿಹನು ಕೋಟೆಯಿಂದ ಕೆಳಗಿಳಿತಂದು!
ಅಂಗರಕ್ಷಣೆಗೆಂದು ಮೂವರನೆ ಜೊತೆಗೊಂಡು
ನಿಸ್ಸಹಾಯಕನಾಗಿ ಬರುತಿರಲು, ತಾವಿಂತು
ಸೈನ್ಯಸಂದೋಹ ಶಸ್ತ್ರಾಳಿಗಳ ಸಾಕಲ್ಯ
ಚತುರಂಗದೊಡನಕಟ- ಕೇಸರಿ ಕುರಂಗಗಳ
ಆಸರೆಯ ರಕ್ಷೆಯಲಿ ಸಲುವಂತೆ- ಬರಬಹುದೆ?

“ಕೋಣ ಸೊಕ್ಕಿದರಾನೆಯಾದೀತೆ? ಹೆಬ್ಬೆರಳು
ಬೀಗಿ ಬೋದಿಗೆಕಂಬವೆನಿಸೀತೆ? ಭೂನಾಗ
ಮಾನಾಗದಿದಿರು ತಲೆಯೆತ್ತೀತೆ? ಖಾನರಿಗೆ
ಭಯವೇಕೆ? ಕಾವಲಿನ ಬಲವೇಕೆ? ಕಡಲಿನಲಿ
‘ಎದ್ದ ತೆರೆ ಕುಸಿಯುವುದು ಬಿದ್ದ ತೆರೆ ಹಸರುವುದು’-
ಎನೆ, ಬಿದ್ದ ಬೇಡಿ ಬಲಗೊಳ್ಳುವುದೆ ಸರಿಯೆಂದು

ಬಗೆವಿಹ ಶಿವಾಜಿಗಭಯವನು ಕರುಣಿಸಲೆಂದು
ಆತನೊಲು, ಮೂವರನೆ ಕೂಡಿ ಮುಂಬರಲೊಪ್ಪಿ
ಭೀತನನು ಸಂತಯಿಪ ಹೊಣೆ ತಮಗೆ ಸಂದಿಹುದು.

“ರೂಪದೆಡೆ ಮೋಹ, ಸಂಪತ್ತಿನೆಡೆ ಕಾರ್ಪಣ್ಯ,
ಅಧಿಕಾರದಲಿ ಹೆಮ್ಮೆ, ಪದವಿಗೆ ದುರಭಿಮಾನ
ಕಾಡುವವು ಸಾಜದಲಿ ಮತಿಗೆ ವಿಕೃತಿಯನೆರೆದು!
ಅಂತೆ– ಬಲದೆಡೆ ಛಲವು, ಛಲದೆಡೆಯೊಳಾಗ್ರಹವು,
ಆಗ್ರಹದಿ ಹಗೆ, ಹಗೆಯೊಳುನ್ಮತ್ತತೆಯ ಬಗೆಯು,
ಆ ಬಗೆಗೆ ದಗೆಯು, ದಗೆಯಲ್ಲಿ ವಿಶ್ವಾಸಹತ
ಹಾಲಾಹಲದ ಹೊಗೆಯು ಹಬ್ಬಿ ವಾತಾವರಣ
ವಿಷಮವೆನಿಸುವುದು ಸಂಧಾನಕ್ಕೆ! ಇದನರಿದು
ಬಲಗಳೆಲ್ಲವ ಹಿಂದೆ ಕಳುಹಿ ಕೃಪೆದೋರುವುದು.”

ಮೇಗರೆಯ ಮಾತಿನಲಿ ಓಗರದ ರುಚಿ ಹಿರಿದು,
ಕೃತಕ ವಿನಯದ ಬಾಗು, ಕೈಮುಗಿದ ಆ ಸೋಗು!
ಕೂರಸಿಯ ಧಾರೆಗಂಟಿದ ಜೇನು, ಕುದುರೆಯನು
ಸಿಂಗರಿಸುವಂತೆಸೆವ ಜೀನು, ತಳಿರೆಲೆ ಹೊದ್ದು
ಹುದುಗಿ ಬಾಯ್ದೆರೆದಿರುವ ಬೋನು, ಗಾಳವ ಮುಚ್ಚಿ
ಕೋದೆಸೆದ ಕಿರುಮೀನು, ಕಹಿಗುಳಿಗೆಯನು ಹೊಚ್ಚಿ
ಕಣ್ಸೆಳೆವ ಸಕ್ಕರೆಯ ಗಿಣ್ಣು, ದೂತನು ಹೊಗಳು
ಹೆಂಡವನು ಹುಳಿಸಿ ಹೊಯ್ದಂತೆ ಆಡಿದ ಮಾತು!
ಖಾನಸುಬ್ಬೆದೆ ಬಾತುಹೋಯ್ತು! ಗಹಗಹಿಸಿದನು
ವಿಕಟಾಟ್ಟಹಾಸದಲಿ ಹುಳುಕು ಹಲ್ಲನು ಕಿರಿದು!

“ಆಗಲಾಗಲಿ, ನಿಮ್ಮ ನಾಯಕ ಶಿವಾಜಿ ಭಯ
ನೀಗಾಡಿಕೊಳಲಿ! ಮುಂದೆಂತಿದ್ದರೂ ನಮ್ಮ

ಬಿಜಪುರದ ಗದ್ದುಗೆಯ ಬಂಟನಪ್ಪವನಲ್ತೆ?
ಸುಜನಮೌಳಿಗಳ ಮತಿಗೌದಾರ್ಯವೊಂದೆ ಕೃತಿ!
ಮನ್ನಿಸಿದೆ ನಿಮ್ಮ ಬಿನ್ನಹಗಳನು. ಅರಮನೆಯ
ಗೌರವದ ಘನತೆಗೆಂದೇ ಕೆಚ್ಚಿನುರವಣೆಯ
ಪರಿವಾರ ಕೂಡಿ ಬಂದೆವು ಹೊರತು, ಕಾರಣೆಯ
ಬಳಿದು ಬಲಭಿತ್ತಿಯನು ಕೈಗೈಯಲೆಂದಲ್ಲ.
ಶಿಕ್ಷೆಗೇ ತಳತಂತ್ರ, ರಕ್ಷೆಗೇತಕೆ ತಂತ್ರ?
ಭೀತಿಯಲಿ ಮೈತ್ರಿ, ಖಾತಿಯೊಳಂತೆ ಸಂಪ್ರೀತಿ
ಆತು ನಿಲ್ಲದು ಸಾಜ! ಕರೆತಂದ ಕಟ್ಟಾಳ
ಕೂಟಗಳನೊಡನೀಗ ಹಿಂದಟ್ಟುವೆನು ನೋಡ!"
ಎನ್ನುತಿರೆ ಖಾನ, ಮುಂಬಂದು ಕೃಷ್ಣಾಜಿಯದೊ
ಎಚ್ಚರದ ನುಡಿಯ ಸೋಗಿನ ಬಿಚ್ಚು ಬಳ್ಳಿಯದಿ
ಚುಚ್ಚಿದನು ಮೆದುವಾಗಿ ಮಂದಹಾಸದಿ ಬಾಗಿ!

"ಅರಿಕೆಯೊಂದೇ ನನ್ನ ಸರಕು! ಖಾವಂದರಲಿ
ಒರೆದ ಮಾತಿಗೆ ಮತ್ತೆ ಎರಡಿಲ್ಲವೆನೆ ಕಂತೆ-
ಯಾಗುವುದು ನನ್ನ ನುಡಿಯಾದರೂ ಮಚ್ಚಿಂತೆ-
ಯನು ನಿವೇದಿಸದುಳಿಯಲಾರೆನೀ ಬರಿ ಬೊಂತೆ-
ಯನ್ನವಧರಿಪ ಸೈರಣೆಯ ಕೊಂಡು, ಮನದಂತೆ
ಮಾಡಬಹುದಲ್ತೆ? ಬಡ ಕರ್ಮಚಾರಿಯು ನಾನು!
ಭೂರುಹಕೆ ಬಂದಣಿಕೆಯೊರೆಯೆ ಬುದ್ಧಿಯೆ? ಜಿನಸಿ-
ನುಗ್ರಾಣದಲ್ಲಿ ಹೆಗ್ಗಣದಾಧಿಪತ್ಯವೇ?
ಕಬ್ಬುತೋಟದಿ ನರಿಯ ಕಾರ್ಯಭಾರವೆ? ಯೋಗಿ-
ಗಪ್ಸರೆಯ ಕಿವಿಗುಟ್ಟೆ? ಹೊಂತಕಾರಿಯ ಹೊಟ್ಟೆ-
ಗಾಮಶಂಕೆಯ ರುಚಿಯ ಹಿತವಾದವೇ? ಸಣ್ಣಿಯ
ಸೂಕ್ತಿಯೇ ರಾಜಮಾನ್ಯಗೆ? ಸನ್ನಿಧಾನಕ್ಕೆ
ನನ್ನ ಬೋಧೆಯೆ? ಧೀರ ಸಾಹಸದ ಮಾನದಲಿ,

ತಮ್ಮ ದೋರ್ದಂಡ ವಿಕ್ರಮದ ಪರಿಮಾಣದಲಿ
ತಾವಾ ಶಿವಾಜಿಗಿತ್ತಭಯೋಕ್ತಿ ಸುಸ್ಪಷ್ಟ!
ಅಗ್ರಣಿಯ ವದನೋಕ್ತಿ ಅರ್ಘ್ಯ ಮುಕ್ತಾ ಶುಕ್ತಿ!
ರನ್ನಕೇತಕೆ ಹೊನ್ನ ಕಟ್ಟು? ಕತ್ತುರಿಗಂತೆ
ಹೂವಿನೆಣ್ಣೆಯ ಗಂಧದಂಟು, ಕಡಲಿನ ತೆರೆಗೆ
ಕಾಸಾರವಲಿಯೊಡನೆ ನಂಟು, ಸುಳಿಸುಟ್ಟುರಿಗೆ
ಬೀಸಣಿಗೆಯಿಂ ತೀಟ ಬೇಕೆ? ವಿದ್ಯುಲ್ಲತೆಗೆ
ಆಸರೆಯ ವೃಕ್ಷವೊಂದೇಕೆ?– ಸಾಜವು! ಅಂತೆ,
ಅಸಹಾಯ ಶೂರರಿಗೆ ಅಂಗರಕ್ಷಕರೇಕೆ?
ಎಂಬ ನುಡಿ ವೀರಭಾಷಿತ ಮೇಘಗರ್ಜನೆಯ
ಅಂಬರದ ಸಾಣೆಗಲ್ಮಸೆದ ಕಿಡಿಯೋಲ್ ಸತ್ಯ!
ಆದರೂ ಅಪರಿಚಿತವೀ ಎಡೆಯೊಳಿಂತೀಗ
ಅಪರಿಮಿತದೀ ಸಂಖ್ಯೆಯಾಳುಗಳು ಬೇಡವೇ?
ಇರುಳು ಕಂಡಿಟ್ಟ ಗರ್ತದಿ ಹಾರುವುದೆ ಹಗಲು?
ಧೃತಿಯ ನಿರ್ಲಕ್ಷ್ಯದಲಿ ಮತಿಯ ಮಸುಳಿಪುದೇಕೆ?
ಎನುವೆನ್ನ ಸಂದೇಹಕೇನಭಯವೀಯುವಿರಿ?
‘ಕಲಿಗೆ ನೆಚ್ಚಿಗೆಯೊಂದೆ ಕೆಚ್ಚನಳೆಯುವ ಪಾತ್ರೆ,
ವೀರ್ಯವಿಶ್ವಾಸವೇ ಒರೆಗಲ್ಲು’ –ಎನ್ನುವಿರೆ?”

ಸೂತ್ರಧಾರನು ಎರಡು ಗೊಂಬೆಗಳನೊಮ್ಮೆಲೇ
ಕುಣಿಸುವಂದದೊಳಾಹ ಕೃಷ್ಣಾಜಿಯೊಡನೊಡನೆ
ಪ್ರಶ್ನೆಗುತ್ತರವ, ಸಂಶಯಕೆ ಪರಿಹಾರಗಳ
ತೋರಿದನು ಪಗಡೆಯಾಟದ ಲೀಲೆಯಂದದಲಿ.
ಜೀವ ಗರ್ಭಾಲಯಕೆ ಕೊರೆದ ಕನ್ನದ ತೂತು
ಕೃಷ್ಣಾಜಿ ಕಟ್ಟಿಸಿದ ಮಾತು; ಖಾನನು ಹೂತು
ಹೊಕ್ಕನಹ! ಉದುರಿದವು ಬೀತು ಉಳಿದಾಳುಗಳ
ಬಹು ನಿರೋಧದ ತರಗುಗಳು! ನಕ್ಕನಾ ಖಾನ;

ಗಹಗಹಿಸಿದನು ಮರಳಿ– “ಮುತ್ತಿನಂಥಾ ನುಡಿಯ-
ನಾಡಿದೆಯ ಕೃಷ್ಣಾಜಿ? ನೈಪುಣ್ಯವೇನನುಮ!
ಏನೆಂದೆ ಏನೆಂದೆ? ‘ಕಲಿಕೆ ನೆಚ್ಚಿಗೆಯೊಂದೆ
ಕೆಚ್ಚನಳಿಯುವ ಪಾತ್ರೆ!... ವೀರ್ಯವಿಶ್ವಾಸವೇ
ಒರೆಗಲ್ಲು!...’ ಆಹ! ನಿಜನಿಜ! ಸಾವಿರಕ್ಕೊಂದು
ಮುತ್ತು ನೀನಾಡಿದೀ ಮಾತು!” ಎನುತೆದೆಯುಬ್ಬಿ
ಬಂದ ಪಡೆಗಳನೆಲ್ಲ ಹಿಂದಟ್ಟಿದನು ಮೊದಲು
ತಂಗಿದ್ದ ‘ವಾಯಿ ಹಳ್ಳಿ’ಗೆ– ಮೂವರನ್ನುಳಿದು!
ಒಬ್ಬ ಸಯ್ಯದ್‌ಬಂಡನೊಬ್ಬ ಕರಿಮನು ಮತ್ತೆ
ಮೂರನೆಯನಾತನೇ ಕೃಷ್ಣಾಜಿ; ಚೆನ್ನಾಯ್ತು!
ಭಾವನೋದ್ವೇಗವದು ಗದ್ದುಗೆಯನೇರಿದರೆ
ಕಾರಣ– ವಿವೇಕಗಳ ಗಡಿಪಾರು ಸಾಜವೆನೆ
ಗಾದೆಯರ್ಥವು ಮರಳಿ ಹೋದ ಪಡೆಗನ್ವಯಿಸೆ,
ದೂತ ನಸುನಕ್ಕು, ಕೃಷ್ಣಾಜಿ ಕಡೆಗಣ್ಣ ಸಂ-
ಕೇತವನ್ನನುಮತಿಸಿ ಹೊರಟ ಖಾನನ ನಮಿಸಿ.

[ಕದಿರು ಏಳು]

೧

ಮಂಟಪವ ಹೊಗುತಿರಲು ಕಂಡನಾ ಸಿಂಗರದ
ಎಂಟುದೆಸೆಗಳ ಮೇಲುಗಟ್ಟುಗಳನು,
ತೋರಣಂಗಳ, ಖಾನನಂತೆಯೇ ಜೋಲುತಿಹ
ಜಾಲರಿಗಳಚ್ಚರಿಯ ಮಟ್ಟುಗಳನು,
ಆಸನಂಗಳ ನಡುವಿನಗ್ರಪೀಠೋನ್ನತಿಯ,
ಸುಭಗತೆಯ, ಚಿತ್ತರದ ಪಟ್ಟೆದಿಂಬಿನ ತತಿಯ,
ರನ್ನಗಂಬಳಿಯ, ಹೂವೆಣ್ಣೆ ಪನ್ನೀರುಗಳ,
ಚಿನ್ನಬೆಳ್ಳಿಯ ಕಳಸಕೂಟಗಳನು.

೨

ಹೊನ್ನ ಹರಿವಾಣದಲಿ ವೀಟಿಕೆಯ, ಹಿಂಬದಿಯ
ತಲೆದೆಸೆಗೆ ಬೀಸಲಿಹ ಬಿಜ್ಜಣಿಕೆಯ,
ಭಿತ್ತಿಗಳ ನಿಲುವಿಕೆಯ, ಜೋಡಿಕೆಯ, ಗಾಡಿಕೆಯ
ಕತ್ತೆತ್ತಿರುವ ಕಲೆಯ ಬಚ್ಚಣಿಕೆಯ
ಕಾಣುತೊಂದೊಂದಾಗಿ ಮೂಗುವಟ್ಟನು ಖಾನ!
ಸಯ್ಯಡನು ಸೈರಣೆಯ ಕೆಟ್ಟು ಸುಯ್ದನು, ಚೋದ್ಯ
ಕಂದರದಿ ಕೋಲ್ಮಿಂಚುದೊಂದಿಯನು ತೊಡೆದಂತೆ
ನಿಂದ ಕರಿಮನ ನಿಲುವು ನಿರ್ಗಡಿಕೆಯ!

೩

ಕೃಷ್ಣಾಜಿ ಕಣ್ಣರಳಿ, ವಿಸ್ಮಯದ ಚಳಿಯೇರಿ,
ನಿಸ್ತರಣಕೆನೆ ಹೊದ್ದ ನುಡಿಗಂಬಳಿ–:
"ಬೆಟ್ಟದಿಲಿ ಕೂಡಿಟ್ಟ ಒಟ್ಟಜೆಯ ಸಿರಿಗಟ್ಟ,
ಪೊಟ್ಟ ವಕ್ತೃತ್ವದೆಡೆಗಿಟ್ಟ ಜೋಳಿ!"
ಎಂದು ಹುಸಿಯಣಕ ಹುಗ್ಗಿಗೆ ಹಂತೆಯನ್ನೆರೆಯೆ,
ಮಂದಹಾಸವ ಮೊಗಕೆ ತಂದೆಂದನಾ ಖಾನ–:
"ಕೆರೆಯ ಮುಂದರವಟ್ಟಿಗೆಯ ಕಟ್ಟಿ ಮೆರೆವಂತೆ
ಸರುವ ಸನ್ನೆಯವೆನ್ನ ಸಲುಗೆಗಂತೆ!"

೪

"ಖಾವಂದರೇರಿ ಕುಳಿತಿರಿಯಗ್ರಪೀಠದಲಿ
ಮಾವೈಭವೇಶ ಬಲಿರಾಜನಂತೆ!
ದೂರದಿಂದಲೆ ಶಿವಾಜಿಯು ಕಂಡು ಕುಗ್ಗುತ್ತ
ನಿಂದಿರಲಿ ಕುಬ್ಜ ವಾಮನನೊಲಂತೆ!"
ಬಲಿ ವಾಮನರ ಕತೆಯನೇನು ಬಲ್ಲನೆ ಖಾನ?
ಕೃಷ್ಣಾಜಿಯುಪಮಾನ ಹೂವುಹೊಕ್ಕಿದ ಬಾಣ!
ಕುಳಿತರಾ ಖಾನ, ಸಯ್ಯದ, ಕರಿಮರೊಡನೇರಿ
ನಡುವಿಕ್ಕೆಲದಲಂಕೃತಾಸನಗಳ.

೫

ಓಹೋ! ಪ್ರತಾಪಗಡದಿಂ ಶತಘ್ನಿಯ ಗುಂಡು
ಕ್ಷಿತಿಜದಿಂದಂಬರವ ಭೇದಿಪಂತೆ
ಹಾರಿ ಗುಡುಗಿತ್ತೊಡನೆ, ಖಾನ ಪೀಠವ ಕೊಂಡು
ಕುಳಿತೊಡನೆ ಸಂಯಮನಿ ಭೇರಿಯಂತೆ!
ಗಾವುದಂಗಳ ದೂರದಂತರದ ದುರ್ಗದಲಿ
ಯಾವ ಸೂಚನೆಕೊಂಡು ತೋಪು ಹಾರಿತ್ತೆಂದು
ಸೋವರಿಯಬೇಕಿತ್ತು ಖಾನ! ಆದರು ಮೌನ!
ಶೂಲದಲಿ ಹಾಲುಂಬ ತೃಪ್ತಿಯಂತೆ!

೬

ಕೃಷ್ಣಾಜಿಗನಿಸಿತೊಂದು ಕಳವಳವು ಸಂಚೆಲ್ಲ
ಬುಡಕಿತ್ತು ಬಯಲಪ್ಪುದೇನೊ ಎಂದು!
ಬಗೆಯ ಬಿಂಬವು ಮೊಗದ ದರ್ಪಣದಿ ಮೂಡದೋಲ್
ಸನಿಯ ಧಾವಿಸುತೆಂದ ಬಾಗಿ ನಿಂದು.
"ಖಾನಂದರಿಂದು ಆತಿಥ್ಯಗಳ ಮನದಂದು,
ಮಾತಿನಲಿ ಬಿಗಿಹಿಡಿತಗಳ ಮರೆದು, ಔದಾರ್ಯ-
ವಾತಾಪಿಯಾ ಅಗಸ್ತ್ಯಗೆ ತೋರಿದೋಲ್- ಮೆರೆದು
ಮಾಡಬಾರದು." ಎಂದ ಗಮನವೆಳೆದು.

೭

ಮುಂಬರಿದು- "ಕತ್ತೆಗೇತಕೆ ಕತ್ತುರಿಯ ಕಂಪು?
ಕಳ್ಳನಿಗೆ ತುತ್ತುರಿಯ ಸೊಂಪು? ಹೊಲ ಬೇಲಿಯೆಡೆ
ಮುಳ್ಳು, ಗುಡ್ಡಕೆ ಕಲ್ಲು, ಹೈಗನಿಗೆ ಮಡಿಮುರುಳು
ಒಪ್ಪುವವು; ಈ ಶಿವಾಜಿಯೊಳೊರಟು ಸೊಲ್ಲುಗಳ-
ನುಗ್ಗಡಿಸಿ, ಸೆರೆನೋಡಿ ಉಳಿ ಜಡಿದು, ಸಂಧಾನ
ಮುಗ್ಗರಿಸುವಂತೆ ಮಾತಲ್ಲಿ ಮಾತನು ಮಸೆದು,
ನುಗ್ಗಿ ಹಿಡಿಯಿರಿ ಸುಳಿವು ತೋರದಘಟಿತದಂತೆ!"
ಎಂದ ಹಿತವಾದದಂತೆ!

೮

ಮೂಗೊತ್ತೆ ಬಾಯ್ತಾನೆ ತೆರೆವುದೆನೆ, ಖಾನನೆದೆ-
ಯಿಂಗಿತದ ವಿಷವೃಕ್ಷ ಶೃಂಗಕವನರಳಿತೆನೆ,
ಮುಂಕನಲಿ ಮಾತಿಗೇಂ ಬಡತನವೆ? ಹೇಳಿದನು-:
"ಮೆಚ್ಚಿದೆನು ಕೃಷ್ಣಾಜಿ, ನಿನ್ನ ಸಮಯಜ್ಞತೆಗೆ,
ಸೂಕ್ಷ್ಮತೆಗೆ, ಸುಜ್ಞತೆಗೆ, ರಾಜಕಾರಣಮತಿಗೆ!
ಈ 'ಕಾಫರ'ನ ಕೂಡೆ ಸಂಧಾನವೇ ನನಗೆ?
ಸೋಗಿದೇಕೆಂದೆನುವೆ? ಮಗುವ ಮೂಗಿನ ಮೊನೆಗೆ
ಮುಟ್ಟಿಸಿದ ಜೇನವನಿಗೆ!

೯

“ನನ್ನ ಬಗೆಯಿಂಗಿತಕೆ ನಾಲಗೆಯೆ ನೀನಾದೆ,
ನಿನ್ನ ಗೈಮೆಯ ಮಹತಿ ಮನಕೆ ಬಂದಿಹುದೆನಗೆ.
ಫಲಿಸಿದೊಡನೆನ್ನೆಣಿಕೆ, ಗೈದಿಹ ಪರಿಶ್ರಮಕೆ
ತಪ್ಪದು ಪುರಸ್ಕಾರ!” ಎಂದನಾ ಖಾನನಹ!
ಬಂಜೆ ಹುಟ್ಟದ ಮಗನ ಮದುವೆ ಕನಗಾಂಬಂತೆ,
ಖಿಂಜ ಘಟ್ಟದ ಮೇಲಿನೂರ ಕಣ್‌ಗೊಂಬಂತೆ,
ಪಾಣ್ಬೆ ಪಾತಿವ್ರತ್ಯ ಮಹಿಮೆ ಮನಗಂಡಂತೆ
ಹೋಲುವೆಯು ಹದವೊಪ್ಪಿತೇ?

೧೦

ಮಂಡಪದ್ವಾರದೆಡೆ ಧಾವಿಸಿದ ಕೃಷ್ಣಾಜಿ
ಸೂಚಿಸೆ ಶಿವಾಜಿಯಾಗಮನವನು, ಖಾನ ಕಡು
ಕಸುವಿನಲಿ ಕಾಲ ಮೇಲ್ಕಾಲಣೆದು, ಹುರಿಮೀಸೆ
ತಿರುಪಿ ತಿರ‍್ರನೆ, ಗಡ್ಡವನು ನೀವಿ, ನೇರ್ಪಡಿಸಿ
ತಲೆರುಮಾಲನು, ಎದೆಯನುಬ್ಬಿ ನಿಲುವಂಗಿಯನು
ಎಳೆದೆಳೆದು, ಗಾಂಭೀರ್ಯದೊಂದು ಗುಡ್ಡವೊ ಎನಲು
ಕುಳಿತನದೊ! ಕರಡಿಯನ್ನೊದೆವವನ ಹೆದರಿಸಲು
ಕಂಬಳಿಯ ತೋರುವಂತೆ!

೧೧

ಕಳವಳವು ಕರಿಮುನಿಗೆ, ಏತಕೇನೆಂದರಿಯ!
ಎಡಗಾಲನೊಮ್ಮೆ ಮೇಲ್ಕೈಸಿ ಮೇಣ್ ಬಲಗಾಲ
ಮಗುದೊಮ್ಮೆ ಎತ್ತಿಟ್ಟು ಕುಳಿತರೂ ಒಲ್ಲದೆನೆ,
ಎರಡನೂ ಮತ್ತೊಮ್ಮೆ ನೀಳ್ಕರಿಸುತಿನ್ನೊಮ್ಮೆ
ಸುರುಳಿಸುತ ಗಂಟಿಕ್ಕಿ, ಪಾದಗಳ ಮುರುಟಿಸುತ
ನಾಡಿಗಳ ಬಿಗಿದಂತೆ, ಶೀತಕಂಟಿದನಂತೆ
ಕುಳಿತನಹ ಕೈಕಟ್ಟಿ ಎದೆಗೊತ್ತಿ ಬಾಯ್ಬಿಟ್ಟಿ
ಪಡಪಡಿಸುತಿರೆ ಗುಂಡಿಗೆ!

೧೨

ಸಯ್ಯದನ ಮನಕೆ ಹೊಚ್ಚಿತ್ತು ಶೂನ್ಯದ ಹೊದಿಕೆ!
ಕುಂಟ ಕುರುಡರ ಜೊತೆಗೆ ಕಿವುಡನೋಲ್ ಖಾನನಿದೆ,
ಕುಂಡನನು ಗೋಲಕನ ತಂದೆಯಂತ್ಯ ಶ್ರಾದ್ಧ
ಪೌರೋಹಿತಕೆ ಕರೆಸಿದಂತೆ ಸಯ್ಯಾದನಿರೆ
ಕರಿಮುನಿಗೆ, ದತ್ತಪುತ್ರನ ಮಹಾ ಪಿತೃಭಕ್ತಿ
ಯಂತೆ ಕೃಷ್ಣಾಜಿಯಿರೆ ಸ್ವಾಮಿಕಾರ್ಯಕೆ, ಅಲ್ಲಿ
ಬಳ್ಳಿಗುರುಡರು ಸೇರಿ ಹಳ್ಳಕ್ಕೆ ಬಿದ್ದಂತೆ
ನಾಣ್ಣುಡಿಯು ಹುಸಿಹೋಪುದೆ?

೧೩

ಬಂದನು ಶಿವಾಜಿ! ತನ್ನಂಗರಕ್ಷಕರಿಬ್ಬ-
ರೊಡನೆ ಮೇಣ್ ದೂತನೊಬ್ಬನ ಕೂಡಿ ಬರುತಲಿರೆ,
ಬಾಗಿಲಲಿ ನಿಂದಿದ್ದ ಕೃಷ್ಣಾಜಿ ಕಣ್ಮಿಟುಕೆ,
ಥಟ್ಟನಲ್ಲಿಯೆ ಶಿವಾಜಿಯು ನಿಂದು, ತತ್ತರಿಸಿ
ಬೆದರುಗಣ್ಣಿನ ಭಾವವನು ತೋರಿ, ಮಂಟಪದ
ಮಧ್ಯಪೀಠದ ಮೇಲೆ ಮಂಡಿಸಿದ ಖಾನನನು
ಬೆಬ್ಬಳಿಸಿ ಬಿರಬಿರನೆ ಕಂಡು ಬೆಪ್ಪಾದಂತೆ,
ಸೋರಿ ಸೊಪ್ಪಳಿದಂತೆ ತೋರಿದನು ತೊಯ್ದಂತೆ!

೧೪

ಸಯ್ಯದನ ದೆಸೆ ನೋಡುತಿನ್ನೊಮ್ಮೆ ಕಂಪಿಸುವ
ಮೈಯೆಲ್ಲವೈಕಿಲಿನ ತೋಯದಲಿ ಮಿಂದಂತೆ,
ಸುಯ್ಯೆಲರು ಎದೆಗುದಿಯ ಹೊತ್ತು ಹೊರತಂದಂತೆ,
ಹಮ್ಮದದ ಹೊರಳಿಯಲಿ ಬಗೆ ಹೂತು ನಿಂದಂತೆ,
ಭಾವ ಲಯತೆಯ ಹಾವ ಭಂಗಿಯಲಿ ಸಂದಂತೆ,
ಜೀವ ಜಡತೆಯ ಕೂರ್ಮಖರ್ಪರವ ಹೊದ್ದಂತೆ
ನಿಂದಿಹ ಶಿವಾಜಿಯನು ಖಾನನಗ್ರಾಸನದ
ಮೇಲಿಂದ ಕಂಡನಾ ಕುಳ್ಳಸನು, ಪೊಳ್ಳನನು.

೧೫

ಕೈಯೊಂದಕೆಡೆಯಿಲ್ಲ ತನಗೆಂಬುದನ್ನಂತೆ
ಕಾಯಭಾಂಡದಿ ಕುದಿವ ಭಯದೆಸರ ಪಾಕವನು
ನಡುಕವನು, ಮಿಡುಕವನು, ಬಿರಿದೆದೆಯ ಬಡಕಲನು
ಒಡಕಲನು ಮನಗಂಡು ಮದವುಂಡು ಮುದಗೊಂಡು,
ಒಡನೆ ಕೃಷ್ಣಾಜಿಯನು ಕರೆದು ಕೇಳಿದ"ನೇನು
ಕಾರಣ ಶಿವಾಜಿಯಾ ದ್ವಾರದಾಚೆಯೆ ನಿಂದು
ಭೀರುತೆಯ ಕರ್ದಮದಿ ತೂರಿರುವ ಚರ್ಜೆನಲು
ತೋರುವನು ಹೊಲಬರಿಯದೆಡೆ ಹಸುಳೆ ನಿಂದವೊಲು?"

೧೬

ಕೃಷ್ಣಾಜಿ ಹೊರಬಂದು ಕಾರಣವ ಬೆಸಗೊಳಲು-
ಕಚ್ಚಿತೆನೆ ಮೀನು ಗಾಳದ ಕಣ್ಣಿಯನ್ನಿನಿತು
ಬಿಚ್ಚುತುದ್ದಕೆ ಬಿಟ್ಟು ಮತ್ತೆಳೆದುಕೊಂಬಂತೆ,
ಬೆಚ್ಚುಸೋಗಿನ ದಾರಸುರುಳಿಯನು ಬಿಡಿಸುತ್ತ,
"ಅಯ್ಯೊ! ಕಡುಗಲಿ ಖಾನರೆಡೆಯ ಜಗಜಟ್ಟಿಯಹ
ಸಯ್ಯದನಿಹನು- ತರಕ್ಷುವಿನ ಬಳಿ ವೃಕವೆನಲು!
ಹುಲುಹೋತನೋಲ್ ಬಹೆನೆ ಬಲಿಯಾಗಿ ಬಾಯ್ಗೊಳಲು?"
ಎಂದನು ಶಿವಾಜಿ ವಿಷಮತೆಗೆ ವಿನಯವನೆರೆದು!

೧೭

"ಭಯಶೂನ್ಯವಹ ಕಾರ್ಯ ಕಮನೀಯಗಾತ್ರಿಯೊಲು;
ಇಲ್ಲದಿರೆ ಜೀರ್ಣಿಸದ ಭುಕ್ತಿಯೊಲು, ನೆನಹಳಿದ
ಯುಕ್ತಿಯೊಲು, ಸಮಯಕ್ಕೆ ಸಲ್ಲದಿಹ ಶಕ್ತಿಯೊಲು!
ಸೋದರತೆ ಬಾಂಧವತೆಗಳು ಜೀವ ಜೀವಗಳ
ಸುಮಹಾರದುರುಳಿನಲಿ ಬಂಧಿಪವು. ಭೇದವಿರೆ
ಹಾದಿಯದು ಹುರುಡಿಕೆಯ ಹಳುವಕ್ಕೆ! ಸಯ್ಯದನ
ಕಳುಹಿ ಖಾನಂದರೌದಾರ್ಯವನು ತೋರಿದರೆ
ಆಳನೆನ್ನೊಬ್ಬನನು ತೊರೆವೆನೀಗಲೆ" ಎಂದ.

೧೮

ತುಂಬಿದ ತಟಾಕದಲಿ ಇಂಬಿಹುದೆ ಹಾವಸೆಗೆ?
ನಂಬಿಕೆಯ ತಂಬುರಿಯ ನುಡಿಸೆ ವಿಷಮಶ್ರುತಿಯ
ಹಂಬಲದ ತಂತಿ ಬಿಗಿದನು ಶಿವಾಜಿಯು. ಖಾನ-
ಹೆಮ್ಮೆ ಗುದ್ದಲಿಯೊಂದೆ ತನ್ನ ಬೇರಗೆಯುವುದು
ಎಂಬುದನು ಮರೆದೊಪ್ಪಿ ಸಂಭ್ರಮಿಸಿ, ಸಯ್ಯದನ
ಸಿಂಜಿನಿಯ ತೊರೆಯುವ ಶರಾಸನದ ಇರವಂತೆ
ಕಳುಹಲು, ಶಿವಾಜಿಯೊಳಹೊಕ್ಕು ಬಂದನು– ಬಂಜೆ
ಬಗೆಯೆಡೆಗೆ ಬಸಿರ ದೋಹಳದಂತೆ– ಖಾನನೆಡೆ!

೧೯

ಬಿಳಿಯುಡುಗೆ ತೊಡುಗೆಯ ತುರಾಯಿ ತುದಿಯಲಿ ತಾಯಿ
ಮುಡಿಸಿದ್ದ ಮಲ್ಲಿಗೆಯು ಮಗಮಗಿಸೆ, ಧಾವಳ್ಯ
ಧರ್ಮ ವಪುಗೊಂಡಂತೆ, ಕುಲದ ಗೌರದ್ಯುತಿಯೆ
ಬಂದಂತೆ, ನಲ್ಜಸದ ಹೊಗರೆದ್ದು ಸಂದಂತೆ,
ಪಾವಿತ್ರ್ಯ ಪರಿಶುದ್ಧಿಗಳ ಪುರಂಜನದಂತೆ,
ಪುರುಷಾರ್ಥ ಸಂಚಯದ ಪುದ್ಗಲವಿದೆಂಬಂತೆ,
ಪುಣ್ಯಾರ್ಣವದ ಬೊಬ್ಬುಳಿಯ ಪೊಗರನಾಂತಿರುವ
ಕರ್ಮಪುತ್ರಿಕೆಯಂತೆ ಬಂದನು ಶಿವಾಜಿಯದೊ!

೨೦

ಪುರುಹೂತ ಪುನ್ನಾಗ ಪುಷ್ಕರದ ಬಲುಹಂತೆ,
ಪೂರ್ಣಾಹುತಿಯ ಪುರೋಡಾಶ ಪುಂಜಿತದಂತೆ,
ಪುಷ್ಪಿಸಿದ ಪರಮಾರ್ಥ ಪಾರಿಜಾತವನಾಂತ
ಕುಜದಂತೆ, ಲೋಕ ಲುಂಟಾಕ ತಾಮಸದೆಡೆಯ
ವರ ವಿಭಾವಸುವಂತೆ, ಖಳಲಲಾಟದ ಲಿಪಿಯ-
ನೋದಲೆನೆ ಪುಣ್ಯಾಜ್ಯವನ್ನೆರೆದ ಸತ್ಕೃತಿಯ
ರಜತದೀಪ್ತಿಕೆಯಂತೆ, ನರಮೇಧವೇದಿಕೆಯ
ಧರ್ಮಛತ್ರಿಕೆಯಂತೆ ನಿಂದನು ಶಿವಾಜಿಯದೊ!

## [ಕದಿರು ಎಂಟು]

### ೧

ಬಲೆಗೆರಗಿದಾ ಹಕ್ಕಿಯನು ಕಂಡ ಬೇಡನೆಸೆ
ಕಾಲ್ಗೆಡರಿದನು ಶ್ವಾನ ಕಲಹಕ್ಕೆ! ಪಾದರಸ
ಸುಟ್ಟು ಕುರುಕಲ ಬೊಟ್ಟು ತೊಡಬಹುದೆ? ಕನಗಂಪ
ಮೂಕ ಕನಸಿನ ವಿವರ ಕೊಡಬಹುದೆ? ಮೋರೆಯಿಡೆ
ಮರ್ತ್ಯರಥಟಿಗೆ ಎಂಬುದನು ಮರೆತು ಬಿಡಬಹುದೆ?
ತಿರಿಚುಬಳ್ಳಿಯ ಮಹಿಮೆಯಶ್ವತ್ಥದಿದಿರೆ? ವಿಧಿ
ಬದಲಿಸುವನಾಟವನು ರಸೆಯ ರಂಗಾಲಯದಿ!
ಚಣಚಣಕೆ, ದೊರೆಯಂತೆ ನಟಿಪವನು ನಾಟಕದಿ
ವಿಶ್ವಾಸೆ ತಿರುಪಲೆ ಬೇಕು; ತಿರುಕನಭಿನಯದಲ್ಲಿ
ವೇಷದಲಿ ಭಾಷೆಯಲಿ ದೀನನಂತಿರಬೇಕು;
ನಾಟ್ಯದಲಿ ವಾಸ್ತವತೆಗಿದುವೆ ಹದ. ಮರೆತಂದು
ಕೃತಕಲೋಕಕ್ಕೆ ತೆರೆಯುವುದು ಕಷ! ಶ್ವಾನನೋ-
ಸಂಧಾನದಭಿನಯಕೆ ಸಲ್ಲಿಸಿದನಕಟಕಟ
ಸಮರಾಂಗಣದ ಸಡ್ಡುನುಡಿಗಳನು! ದುಡುಕಿನಲಿ
ಕಾರ್ಯಸಾಧನೆಯಾಗೆ, ಗುದ್ದಲಿಗೆ ಮೇರುವನೆ
ತಿದ್ದಿ ಸಮತಟ್ಟು ಗೈಯಲು ಸಾಧ್ಯವೆಂದಾಯ್ತು!

"ಬೆಟ್ಟದುದಿಯಲಿ ಬೀಡ ಕಟ್ಟಿ ಬಾಳುವ ಬಡವ,
ಬಲು ಮುದುಕ ಬಂದೆ ಸಂಧಾನಕ್ಕೆ- ಧಾರ್ಷ್ಟ್ಯವಿದು!
ಸಮ್ರಾಜರಪ್ರತಿಮ ಸೇನಾನಿಯೊಡನೇನು
ಸರಿ ಮಿಗಿಲ ಸಲುಗೆಯೇ ನಿನಗೆ? ಪ್ರದರ್ಶನವೆ
ಕೊಳ್ಳೆಹೊಡೆದೀ ಧನತೆ ಘನತೆಯೈಸಿರಿಗಳಿಗೆ?
ಸಾರಮೇಯಕ್ಕಂದಣವೆ? ಕಿಟಿಗೆ ಚಂದನವೆ?
ರಾಸಭಕೆ ಹೂರಣವೆ? ದಾಸನಿಗೆ ಧೋರಣವೆ?
ಪುಂಡಾಟವಿದು ಗದ್ದುಗೆಯ ಮುಂದೆ ನಿಗಿಸುವುದೆ?
ಗಾಣದೆತ್ತಿನ ಗೆಜ್ಜೆ, ಬೊಜ್ಜುಹೆಣ್ಣಿನ ಹೆಜ್ಜೆ,
ಮುದಿಯ ಜೋಡೆಯ ಸೆಜ್ಜೆ ಸೊಗಸುವುದೆ? ಸುಲ್ತಾನ
ಸನ್ನಿಧಿಗೆ ಶರಣೆಂದು, ಕೋಟೆ ಘೋಟಕದೋಳಿ
ಶಸ್ತ್ರಾಳಿ ಸೈನ್ಯಾಳಿ- ಸರ್ವವನ್ನೊಪ್ಪಿಸುತ
ತಪ್ಪೊಪ್ಪಿ ತಲೆತಗ್ಗಿ ಬೇಡಿದರೆ ದಂಡನೆಯ
ಕ್ಷಮೆಯ ನೀಡಲುಬಹುದು ಆಸ್ಥಾನವಲ್ಲದಿರೆ
ಸೆರೆಯ ಸಂಭ್ರಮದ ರಾಜಾತಿಥ್ಯ ಕಾದಿಹುದು!"
ಎಂದೆದೆಯ ಮೂಲೆಯಲಿ ಮುಚ್ಚಿಟ್ಟ ಹೊಲ್ಲಿಹದ
ಬಿಂದಿಗೆಯನಡಿ ಮಗುಚಿ ಸುರಿದನಫಜುಲ್‌ಖಾನ!

ಕಿರುನಗೆಯ ಕೇವಣಿಸಿದನು ಶಿವಾಜಿಯು ಮೊಗದಿ,
ಕಲಿತ ಸಭ್ಯತೆಯೊಳಿಹ ಕಡತಂದ ವಿನಯವೆನೆ
ಕೈಜೋಡಿ ಬಿನ್ನವಿಸುವವನಂತೆ ಹೇಳಿದನು,
ಸ್ಫೂರ್ತಿಝುರಿ ರಸನಾಗ್ರದಿಂದ ಹೊರಹರಿದಂತೆ-:
"ಖಾವಂದರೆದುರು ಪ್ರದರ್ಶನವೆ? ಸಾಗರಕೆ
ಎದುರೊಂದು ಹಳ್ಳದಾಟೋಪವೇ? ಸೂರ್ಯನಿಗೆ
ಸೊಡರಿತ್ತಿ ಬೆಳಗಬೇಕೇ? ನನ್ನ ಬಡತನವೆ
ತಮ್ಮ ಪಾದದ ಸೋಂಕಿನಿಂದಾಗಿ ಸೊಂಪೇರಿ
ಸಿರಿಗೆ ಪರಿವರ್ತಿಸಿತೆ? ಅಂತಿರಲದೇ ಭಾಗ್ಯ!

ಸಮ್ರಾಜಸೇನಾನಿಯಾಹ್ವಾನ ಗುರುಕಾರ್ಯ-
ವೆಸಗುತಿರೆ ಘನತೆ ಗೌರವಗಳಿಗೆ ತಕ್ಕಂತೆ,
ನಡೆ ನುಡಿಯೊಳಂತೆ ಸತ್ಕಾರದಾತಿಥ್ಯಕ್ಕೆ
ಲೋಪವೆನ್ನಿಂದೆಲ್ಲಿ ಒದಗೀತೊ, ಅಪಚಾರ-
ವಾದೀತೊ! ಎಂದಂಜಿ, ನನ್ನೊಳಿಹ ಸರ್ವಸ್ವ
ಸುರಿಯುತೊಟ್ಟಯಿಸಿದೆನು. ಸೊಕ್ಕಿ ಸೆಟೆದವನಲ್ಲ!

"ಐಸಿರಿಗೆ ಮದಗೊಂಬವನೆ ಮರುಳನೇತಕೆನೆ-:
ವಾರಿಧಿಯ ಮಧ್ಯ ಮಂದರಗಿರಿಯ ಮಥನದಲಿ
ನೀರಸುಳಿಯಲಿ ತಿರುಗಿ ಮೇಲೆದ್ದ ಸಂಸ್ಕಾರ
ಸೋರದೆನೆ ಲಕ್ಷ್ಮಿ ತಿರ್ರನೆ ತಿರಿವ ಗಯ್ಯಾಳಿ!
ಸೊಕ್ಕು ನೈಷ್ಠುರ್ಯವುನ್ಮೋಹ ವಕ್ರತ್ವಗಳ,
ಮದಿರೆ, ವೈಧೂರ್ಯ, ವಿಷ, ದೋಷಾಕರರ ಜೊತೆಯ
ಜನ್ಮದಲಿ ಹುಟ್ಟುಗುಣವೆನೆ ಪಡೆದ ಮಾಕಾಳಿ!
ಎನ್ನುವರು ಶಾಸ್ತ್ರವೇತ್ತರು. ಹೂವಿನೆಸಳಿಂದ
ತೃಪ್ತಿಯಾನುವ ದೇವ ಭಕ್ತಿಯಾತ್ರ್ರಯದಲ್ಲಿ!
ಹುಲ್ಲಿಸಳ ಮೊನೆಯಲ್ಲಿ ತುಂತುರಿನ ಹನಿಯಲ್ಲಿ
ಪೂರ್ಣಬಿಂಬದಿ ಹೊಳೆಯುವನು ಖಮಣಿ! ಉಪಚಾರ-
ದಲ್ಲಿ ಕೊರತೆಯ ಕಾಣದೆನ್ನ ಧನ್ಯನ ಗೈದು,
ದಾರಿದ್ರ್ಯವನೆ ಧನತೆಗೊಯ್ದು ಮುದವಾನುವುದು.
ಸಿಂಧುವನು ಸೇರಿದಂದೇ ಬಿಂದು ಪೂರ್ಣತೆಯ
ಹೊಂದದೇ ವೈಶಾಲ್ಯದಲಿ? ಸಮಸ್ತವನೆನ್ನ
ಸಂಪದವನೀಯೆಡೆಯ ಸರ್ವಾರ್ಪಣವ ಗೈವೆ!"

ವಿನಯಮಂತ್ರಕೆ ಧರೆಯೊಳೆಣೆಯ ತಂತ್ರವದೆಲ್ಲಿ?
ಮೊಲದ ಕೋಡಾಯಿತಾ ವಾದ! ಖಾನನು ನಿಂದ
ನೆಲೆಯೆ ಕುಸಿದಂತಾಯ್ತು! ಗಣನಾಥನನು ಬರೆಯೆ

ಗೌರಿನಾಥನ ಚಿತ್ರ ಮೂಡಿತ್ತು! ಕನ್ನಡಿಗೆ
ಕುರುಡನೊಡೆತನವಾಗೆ ಕಾಣ್ಕೆ ಬರುವುದೆ? ಖಾನ
ಮಾತಿನಲಿ ಕಟ್ಟುವಡೆದಾ ಮೇಲೆ, ನೆರೆಯಳಿದ
ಬಳಿಕ ತೆಪ್ಪವ ಕಟ್ಟುವವನಂತೆ, ಘೋರಣೆಯ
ಬಳುಕಿಸುತ ಮಣಿಸಿ ನುಡಿ ಮಾರ್ಪಡಿಸಿ ಹುಸಿನಗುತ—:
"ಆಹ! ಮೆಚ್ಚಿದೆ ನಾಯಕನೆ ಭಳಿರೆ, ನಿನ್ನ ಧೃತಿ
ಮತಿಯ ಕೊಂಡಾಡುವೆನು! ಮನವ ಪರಿಕಿಸಲೆಂದೆ
ಮುಸೆದ ಬಿರುಮಾತೆಸೆದೆ, ನೋಯದಿರು! ಹಳುವದಲಿ
ಹೂವರಳೆ ಒಲಿದುಂಬರಾರಿಹರು? ಗೆಳೆತನವ
ಗೈದು ಗದ್ದುಗೆಯ ಗೌರವ ಪಡೆದು ಮೆರೆದರೆನೆ
ನಿನ್ನಗ್ಗಳಿಕೆಯು ಮೇರೂನ್ನತಿಯ ಶೃಂಗದಲಿ
ಮಹಿಮೆಯಾಂಪುದು! ಬಾರ, ಬಾರೆನ್ನನಪ್ಪು ಬಾ!"
ಎನುತೆದ್ದು, ಕೊಳ್ಳಿಯಲಿ ತಲೆತುರಿಸಲೆನೆ, ಕೆನ್ನೆ
ಕೆರೆಯಲೆನೆ ಕೃಷ್ಣ ಸರ್ಪದ ಫಣೆಯ ಮೊನೆಯಿಂದ,
ಕೈದೆರೆದು ನಿಂದಿದ್ದನೊಂದಡಿಯ ಮುಂದಿಟ್ಟು.

"ಒಲವು ಓಸರಿಸುವುದೆ? ಹೊಲೆಯು ಬೋಸರಿಸುವುದು!
ಒಮ್ಮೆ ಕೋಮಲನೊಮ್ಮೆ ರುದ್ರಭೀಕರನು ಬಿದಿ.
ನೆರೆ ತುಂಬಿದಾಗ ನದಿ ದಡದಾಟಿ ದುಮುಕದೇ?
ತಮ್ಮಪ್ಪುಗೆಯ ಪಡೆಯೆ ಪುಣ್ಯವಿರೆ, ಪುರುಳಾಯ್ತು
ಪಡೆದೆಲ್ಲ ಭಾಗ್ಯವಿದು! ಭಕ್ತಿಯಾಲಿಂಗನಕೆ
ಸ್ವಾಗತವು ಭಗವಂತನೊಬ್ಬನಿಗೆ! ಬರಬಹುದು."
ಎನ್ನಲು ಶಿವಾಜಿ, ಕೆಳಗಿಳಿದು ಬಂದನು ಖಾನ.
ಸೊನ್ನಾರನಡಿಗಲ್ಲು ಹೊನ್ನ ಮುದ್ದಿಡಲೇನು?
ಬಂದು ತಬ್ಬಿದನಕಟ! ತಬ್ಬಿ ಬಿಗಿದನು ಅಯ್ಯೊ!
ಬಿಗಿದು ಹಿಂಡಿದನಮಮ! ಹಿಂಡಿ ದೊಂಡೆಯನೊತ್ತಿ
ಎತ್ತಿ ಕಾಲ್ಕಿತ್ತಿರಿಸುತಿರೆ, ಶಿವಾಜಿಯು ಚಣದಿ

ಚಡಪಡಿಸಿದನು ಗಂಟಲುಸಿರೊಡನೆ ತಡೆವಡೆಯಿ!
ಕಠಿನತಮ ಸಾಧನೆಗೆ ಹಠಯೋಗಿಯೆನಲುಸಿರ
ಗುಟುಕನೊಡನೆಯೆ ತಡೆದುಕೊಳ್ಳುತಿರೆ, ಚಣಚಣಕೆ
ಘಟಸರ್ಪದೋಲ್ ಬಿಗಿದ ಬಿಗಿಯು ಬಲಿಯುತ್ತಲಿರೆ,
ಮುಂಗುಸಿಯು ತಡೆಯೆಳೆದ ಮಂಡಲದ ಮಧ್ಯದಲಿ
ಮೈಹೊಸೆವ ಮಾನಾಗದಂದದಲಿ ಬುಸುಗುಡುತ,
ಮೈತಿರುಪಿ ಜಾರಿಸುತಲೆಡಗೈಯ ನೀಳ್ಕರಿಸಿ
ಬೆಂಗಡೆಗೆ ಬಿಚ್ಚಿ ಬೆರಳೆಡೆಗಿಟ್ಟ ‘ಹುಲಿಯುಗುರ’
ಕುತ್ತಿ ಖಾನನ ಪಕ್ಕೆಯನ್ನೊತ್ತಿ ಕೀರಿದನು!

ಹರಿಯಿತಾತನು ತೊಟ್ಟ ಜರಿತಾರಿಯುಡುಗೆ, ಮೇಣ್
ಬಿರಿಯಿತಳ್ಳೆಯ ಗೂಡು! ಅರರೆ ಕಣ್ಣೆವೆ ಮುಚ್ಚಿ
ತೆರೆಯುವನಿತರ ಮುನ್ನ ಸಡಿಲಿತಾ ಹಿಡಿತವೆನೆ
ಮುಗ್ಗಟ್ಟಿನಿಂದೆಳೆದು ಬಲಗೈಯ ಭರದೊಡನೆ
ಕಿಗ್ಗಟ್ಟಿನಲ್ಲಿದ್ದ ಕಿರುಗತ್ತಿಯನು ಸೆಳೆದು
ನುಗ್ಗಿಸಿದ ಬಲದಳ್ಳೆಯಲಿ ಹಿಳುಕು ಹುಗಿವನಕ!

ತಾಳೆ ಕೆಡೆದಂತೆ ಬಿದ್ದನು ಖಾನ ದೊಪ್ಪೆಂದು!
ಕಾಲುವೆಯೆ ಹರಿಯಿತಾ ಕೆನ್ನೀರು ಮಡುಗಟ್ಟಿ!
ಕರಿಮನನು ಕರೆಕರೆದು ನರಳುರುಳಿ ಹೊರಳಿದನು.

ಕರಿಮ ಕುಳಿತೆಡೆಯಿಂದ ಕದಲದೋಲ್ ಹಿಂದೆಸೆಯ
ಕೃತಕಭಿತ್ತಿಗಳ ಮರೆಗೊಂಡಿದ್ದ ಕಟ್ಟಾಳ
ಪಡೆಯವರು ಕೈದುಗೈಯವರಾಗಿ ಮುನ್ನೆಗೆದು
ಕಾಯ ಮಿಸುಕದ ಹಾಗೆ ಕಟ್ಟಿದರು ಆಸನಕೆ!

## ೨

ಕುಣಬಿಗಳು ತುತ್ತೂರಿಯೂದಿದರು; ದುರ್ಗದಲಿ
ತೋಪು ಹಾರಿತು! ಸದ್ದು ಪೊದರುಗಳ ಮಧ್ಯದಲಿ
ಗಿಡದೊಡಲ ನಡುವಡಗಿ ನಿಂದ ಸಿಡಿಲಾಳ್ಗಳಿಗೆ
ಕೇಳಿ ಮನದಂದು ವಿಜಯವನೊಡನೆ ಪುಟಿದೆದ್ದು
ಘೋಷಿಸುತ ನೆಗೆದು ಮುಂಬರಿ ಕಂಡರೇಕಾಂಗಿ-
ಯಾಗಿ ಸಾಗುವ ಸಯ್ಯದನನಯ್ಯೊ! ವೃಕವೃಂದ
ಕಡವೆಯನ್ನಡ್ಡವಿಸಿ ಹಿಡಿವಂತೆ ಹಾರಿದರು!
ಹಿಡಿದರೆಂತೋ ಹಿಡಿದು ಜಡಿದರೆಂತೋ ಜಡಿದು
ಕೆಡೆದರೆಂತೋ ಕೆಡೆದು ಕಟ್ಟಿಬಿಗಿದರು; ಬಿಗಿದು
ಕಾಣಿಕೆಯನಂತೆ ಒಯ್ದರು ಶಿವಾಜಿಗೆ ಕೆಲರು!

ಮರಳಿ ಕೊಂಬೂದಿ ಒಗ್ಗೂಡಿದರು ಮಿಕ್ಕವರು.
ಏನೊ ಸಂಕೇತಭಾಷೆಯಲಿ ಸೂಚನೆಗೊಂಡು,
ಒಬ್ಬರೊಬ್ಬರನು ರೂಪಾಂತರಿಸಿ ಕೈಗೈದು,
ಖಾನ ಹಿಂದಟ್ಟಿದ್ದ ಸೇನೆಯದು ಸಾಗುತಿರೆ,
ಗುಡ್ಡದೊಳದಾರಿಯಲಿ ಮುಂದೋಡಿದರು! ಮರಳಿ
ಗಿಡ ಪೊದರು ಗವಿ ಬಂಡೆ ಹೆಗ್ಗಲ್ಲುಗಳ ಸೆರೆಯ
ಮರೆಯೊಳವಿತರು. ಸಾಗುತಿರೆ ಸೇನೆ ತನ್ನಂತೆ
ದ್ವಿಗುಣಿಸಿತು ಸಂಖ್ಯೆ ಕಾಲಾಳುಗಳಲಚ್ಚರಿಯು!

ಬಿಲ್ಲು ಬಲ್ಲೆಯ ಕೋವಿ ಕೊಂತಗಳ ಕೂರ್ಬಾಳ
ಕೈದುಗಳನೆಲ್ಲ ಹೊರೆಗಟ್ಟಿ ಆನೆಯ ಬೆನ್ನ
ಸೇರಿ ನಡೆಯುತ್ತಿಹರು ಸೈನಿಕರು. ಅಕಟಕಟ
ಮರುಳನಾರೋ ಕಡಿದನಾ ಆನೆ ಸೊಂಡಿಲನೆ!
ಹುಚ್ಚೆದ್ದು ನೋವಿನುರಿಯಲ್ಲಿ ಘೀಳಿಡುತಲದು

ಭಗ್ನಕರವನು ಬೀಸಿ ನೆತ್ತರೋಕುಳಿ ಸುರಿಸಿ,
ವಿಸಟಂಪರಿದು ಸೇನೆಯನು ತೊತ್ತಳಂ ತುಳಿದು
ಧಾವಿಸಿತು– ಕಡುಗಿ ಕಾಲನ ಕೋಣನೆನುವಂತೆ!

ಸುಳಿವುದೋರದೆ ನಡೆದ ಕೃತ್ಯವಿದರರ್ಥವದು
ತಿಳಿವಿಗಂಟದ ಮುನ್ನ ಸೈನಿಕರು ಓಡಾಡಿ
ಬೆದರು ಬೆರಗಿನ ಕಡಲ ನಡುಬಿದ್ದು ಒದ್ದಾಡಿ
ತೇಕು ಮುಳುಗಾಗಿ ಕೈಕಾಲ ಬಡಿಯುತ್ತಲಿರೆ,
ಜವನಾಳುಗಳೆ ರೂಪ ಮರೆಸಿ ಕೈದುವಕೊಂಡು
ಸವರುವಂತಿರೆ ಮಡಿಯುತಿದ್ದ ಸೋಜಿಗವೇನು?
ಗೋಳು ಗೊಂದಲ ಗುಲ್ಲು, ಘೀಳು ಹೇಷಾರವಕೆ
ಧೂಳೆದ್ದಿತಂಬರಕೆ! ಏನೆಂದು ಎಂತೆಂದು
ಹೊಳೆಯದಾರೊಬ್ಬರಿಗೆ! ರುಂಡ ಕೈಕಾಲಳ್ಳೆ
ಮುಂಡಗಳ ಕುತ್ತಿರಿತಗೊಂಡು ಬಿದ್ದುರುಳುತಿಹ
ಸಂದಣಿಯೆ ಗೊತ್ತು! ಹಾ! ವೈರಿ–ಮಿತ್ರರ ಗುರುತು
ಹತ್ತದಾಯಿತು ಬಿಜಪುರದ ಭಟರಿಗಿನಿತೊಂದು!

ಅನಿತರೊಳಗದೊ ಅತ್ತ ಹುಲ್ಲ ಬಣಬೆಗೆ ಬೆಂಕಿ!
ಇತ್ತಣಿಂದಿದೊ ಇಲ್ಲಿ ಬಂಡೆಯುರುಳಿತು ದಾರಿ-
ಗಡ್ಡವಿಸಿ, ಅದರಡಿಗೆ ಬಿದ್ದು ಮಡಿದವರೆಷ್ಟೊ!
ಮುಗುದೊಂದೆಡೆಗೆ ಮರದ ಮೇಲಿನಿಂದುರುಳುಗಳ
ಹಗ್ಗತುದಿಗಳಲಿ ನೇತಾಡಿದರು ಹತ್ತೆಂಟು
ಓಡುತಿಹ ಜನರದೋ! ನೆಲಗೆತ್ತು ಧಾವಿಸುತ
ಮಲಗಿದರು ಕಂದರದ ಕೆಳಗೆ ಮಮ್ಮಳಿಸುತ್ತ!
ಹೆಜ್ಜೆಹೆಜ್ಜೆಗೆ ಸಾವು! ಹಿಮ್ಮುಂದಿನೆಡಬಲಕೆ
ಎತ್ತಲೂ ಕಾಲಿಡಲು ಅರಿಯದಾಗಲು, ಕೆಲರು
ನಿಂತಲ್ಲಿ ಶರಣೆಂದು ಕೈಮುಗಿದು ಗೋಳಾಡಿ
ನಾಣನುಂಡರು– ಅಂತೆ– ಬದುಕಿಕೊಂಡರು ಮತ್ತೆ.

ತಾಸೊಂದರನಕವೀ ಮನುಜ ಮಾರಣಯಜ್ಞ
ಬಲಿಯುಂಡು, ಬಿಜಪುರದ ಭಟರರ್ಧಸಂಖ್ಯೆ ಜನ
ಭವಬಂಧ ನೀಗಿ, ಮಿಕ್ಕವರೊಳರೆ ಮರೆಹೋಗಿ,
ಕೈಸೆರೆಗೆ ಸಿಕ್ಕಿ, ಖಾನನ ಸೇನೆ ಸಂಪೂರ್ಣ
ಧ್ವಂಸವಾಯಿತು– ಸಾಸಿರದ ಸಂಖ್ಯೆಯಲಿ ಕುದುರೆ
ವಶವಾಗೆ ಹೊರೆಯು ಸಿಡಿಮದ್ದಾ ಮರಾಟರಿಗೆ!

೩

ಸಂಧಿಮಂಡಪದತ್ತ ಬಿದ್ದ ಖಾನನ ಸುತ್ತ
ಕೂಡಿದರು ಎಂಬತ್ತಆರು ಕುಣಬಿಗಳೆಲ್ಲ.
ದೂರ ಸರಿಸಿದನವರನಾ ಶಿವಾಜಿಯು; ಮತ್ತೆ
ಕಳುಹಿದನು ಕರಿಮನನು ಕೈಬಿಡಿಸಿ ಖಾನನೆಡೆ!
ಆತ್ಮೀಯ ಮುಖದರ್ಶನವೆ ಆತ್ಮಕುತ್ಥಾನ-
ವಲ್ತೆ ಕೊನೆಗಾಲದಲಿ? ಹಿಡಿತಂದರನಿತರಲಿ
ಸಯ್ಯದನನಾ ಎಡೆಗೆ ಕಟ್ಬಾಳು ಕುಣಬಿಗಳು;
ಜಟ್ಟಿಯಾತನ ಸೆರೆಯ ಬಿಟ್ಟು ಖಾನನ ಕೆಲಕೆ
ಕಳುಹೆ ಸೈಯದ ಕರಿಮರಿಂಥ ಔದಾರ್ಯವನು
ಕಂಡುದಿದು ಇಂದೆ ಹೊಸತೆಂಬಂತೆ ಮೆಚ್ಚಿದರು–
ಸೌದರ್ಯವೇ ಶಿವಾಜಿಯ ಶೌರ್ಯವೆಂದರಿತು.
ಮನವೆಳಸುವುದು ಎಲ್ಲಿ ಮಹಿಮೆ ನೆಲಸುವುದಲ್ಲಿ;
ಹಗೆಯಿಂದ ಹಗೆಯಳಿಯೆ– ಕೆಸರಿ ಕೆಸರನು ತೊಳೆಯೆ?
ಹೊಲೆಗೆ ಶುದ್ಧಿಯೆ ಮಡಿಯು, ಕೊಲೆಗೆ ಕರುಣೆಯೆ ಪಡಿಯು!
ಉಗುರ ಹಿಂಸೆಯನಾಂತರೂ ತಂಬುರಿಯ ತಂತಿ
ಮಧುರಸ್ವನವನೀವವೋಲ್ ಮಹಿಮರಾಚರಣೆ!

ಕರಿಮು ಖಾನನ ತಲೆಯನೆತ್ತಿ ತೊಡೆಯೇರಿಸುತ
ಕಣ್ಣೀರ ಮಿಡಿಯುತಿರೆ, ಸಯ್ಯದನು ಸುಯ್ಯೊಡನೆ
ಬಿಜ್ಜಣಿಕೆ ಬೀಸೆ ಗಾಳಿಯ ಕೋಳ್ಗೆ ಕಣ್ದೆರೆದು
ಖಾನ ತನ್ನವರ ಮೊಗ ಕಂಡೊಮ್ಮೆ ಕಣ್ಮುಚ್ಚಿ,
ಮತ್ತೆ ನಿಡುನೋಟದಲಿ ಕಂಡನು ಶಿವಾಜಿಯನು.
ಮಾತು ಹೊರಡದು ದೇಹ ಸೋರಿ ನಿಶ್ಶಕ್ತಿಯಲಿ;
ಆದರೂ ಆ ನೋಟದಲಿ ಮರುಕ, ಬಗೆ ಮಿಡುಕ,
ತಪ್ಪಿನೊಪ್ಪಿಗೆಯ ತೆರ ತೋರುತಿರೆ ಬಂಬಲಿಸಿ,
ತಿಳಿದು ಮುಂಬಂದನು ಶಿವಾಜಿ! ಕುಳಿತನು ಸನಿಯ;
ಬಾಗಿ ಮೆದುವಾಗಿ ವಿನಯಾರ್ದ್ರವಾಣಿಯೊಳಿಂದ–:

"ಖಾನರಿನ್ನಪರಾಧವನ್ನು ಮನ್ನಿಸಬೇಕು.
ಅಂತೆ ಮನವಾನಿಸಿರಿ ನೆಮ್ಮದಿಯ ನೆಲೆಯಲ್ಲಿ.
ಸೋಲಿಂದು ತಮ್ಮ ಪಾಲಿಗೆ; ನಾಳೆ ನನಗಿಹುದು.
ಆಗಿ ಹೋದುದಕಿನ್ನು ಅಳಲಿ ಫಲವೇನಿಹುದು?
ಪೌರುಷಕೆ ಫಲವೆಂದು? ದೈವ ಕೃಪೆ ಬಂದಂದು!
ಆದರೂ, ಯೋಧ ಕರ್ತವ್ಯ ನಿರ್ವಹಣೆಯಲಿ
ಮೋದ ಸಂತೃಪ್ತಿಯಾನಲುಬೇಕು. ಏತಕೆನೆ,
ವಿಜಯ ಪರಿಭವ ಲಾಭ ನಷ್ಟಗಳ ನಿರ್ಣಯವು
ಬಾಹ್ಯಗಣನೆಗೆ ಮಾತ್ರ! ಸುಖ ಸಂಪದದ ಮೊತ್ತ-
ವೊಂದನೇ ಬದುಕಿನಲಿ ಬಯಸಿದರೆ ಬಾಗುಳಿನ
ಬಲುಸವಿಯ ಹೃದಯಾನುಭವವೆಂದು ಬಂದೀತು?
ಜೀವಹೇಮವು ತಿರೆಯ ಕೋವೆಯಲಿ ಪುಟಗೊಂಡು.
ಮೋಹ ಸಂತಾಪದಗ್ನಿಗೆ ಬೆಂದು, ಹಮ್ಮುಕೊಳೆ
ಕರಗಿತೆನೆ ಸುಸ್ವರ್ಣವಾಗುವುದು ಸಾಜದಲಿ.
ಬರುವ ಬನ್ನವನಾತ್ಮ ಶಿಕ್ಷಣಕೆ ಸರಿದೂಗೆ
ಹಿರಿದಪ್ಪುದೆಮ್ಮ ಸಂಸ್ಕಾರ; ಆ ಸಂಸ್ಕಾರ

ಪರಕೆ ಮೇಲೆತ್ತುವುದು ಜೀವಿಯನು. ಎಂತೆನಲು,
ವಿಶ್ವಜೀವಾಶ್ವತ್ಥ ವೃಕ್ಷ ಮೂಲವು ಪರದಿ;
ಗೆಲ್ಲಾಗಿ ಲೌಕಿಕಕೆ ಹರಡಿಹೆವು ನಾವೆಂದು
ಬಲ್ಲವರ ಮತ! ಮಿಕ್ಕ ಶಂಕೆಯನು ಬಿಡಬೇಕು.

"ಬಿದಿಯ ಕೈತಕ್ಕಡಿಯ ತಟ್ಟೆಯೊಂದಕೆ ಪಾಪ,
ಬದಲೊಂದರಲಿ ಬಗೆಯ ಭಕ್ತಿ ಪಶ್ಚಾತ್ತಾಪ-
ವೊದಗುವುವು ತೂಗು ಸರಕುಗಳಾಗಿ ಕೊನೆಯಲ್ಲಿ!
ಖಾನರೇ, ಇಂದು ತಮ್ಮಯ ಕಣ್ಣ ಕೊನೆಯಲ್ಲಿ
ಕೂಡಿರುವ ಕನಿಕರದ ಭಾವ ಪಶ್ಚಾತ್ತಾಪ-
ವೊಂದೆ ಬಾಳಿನ ಬಿರುಸು ಗೈಮೆಯುರಿಯನು ಬಿಡದೆ
ನಂದಿಸಲು ಸಾಕೆನುವೆ; ಅನ್ಯಚಿಂತನೆ ಬೇಡ.
ಬಾಗಿದರು ಬಿರಿದ ನನೆ, ಆಗುವುದು ಫಲಕೆ ಮನೆ-
ಅಂತೆ ತಮ್ಮಸ್ತದಲಿ ಉದಯ ಕಾದಿದೆ ಮುಂದೆ!
ದೊರೆಯದಿದ್ದರು ವಿಜಯ ಗರುಡಿ ಸಾಧನೆಯಿಂದ
ಬರದಿಹವೆ ದೃಢದೇಹ ಪಟುತೆಗಳು? ಅಂತೆಯೇ
ಆತ್ಮಶುದ್ಧಿಯ ಫಲವು ಪರ್ಯಾಯದಲಿ ನಿಜವು.
ಶುದ್ಧಿ ಸಿದ್ಧಿಯ ಧರಿಸೆ ಶಾಂತಿಯೇ ಬಲಭುಜವು.
ದಿವ್ಯ ನಿಃಶ್ರೇಣಿಯಲಿ ನಿಂದಿಹಿರಿ ತಾವಿಂದು;
ಮೇಲೇರಲೆಂದೆನ್ನ ಸಾಂತ್ವನದ ನುಡಿಯೇಕೆ?
ಬೀದಿ ಬೆಳಕೇಕೆ ಸೌಧಾಗ್ರವೇರುವ ಜನಕೆ?

"ವ್ಯಕ್ತಿ ವೈಶಿಷ್ಟ್ಯವೇ ವಿಶ್ವಚರಿತೆಯ ವಸ್ತು;
ತಮ್ಮಿರವು ತಿರೆಯ ಚರಿತೆಯಲಿ ವೈಶಿಷ್ಟ್ಯವನೆ
ತೆರೆಯುವುದು; ಸಂದೇಹ ಬಿಡಿರಿ. ಇಸ್ಲಾಮೆನಲು
ಶಾಂತಿ, ನೆಮ್ಮದಿ, ಸ್ವೈರಣೆಯ ಕಾಂತಿಯೆಂಬುದನು
ತಾವರಿಯದವರಲ್ಲ. ನಮ್ಮೆಲ್ಲರಾಟಗಳು

ಸೃಷ್ಟಿಕರ್ತನ ಕಣ್ಣ ಮುಚ್ಚಾಟವಾ ಶಿಲ್ಪಿ
ಸೃಷ್ಟಿಸೌಧಕ್ಕೆ ನರನಿಟ್ಟಿಗೆಯನೊಟ್ಟಿರಲು,
ಗೊತ್ತೇನು ನಮಗೆಲ್ಲ ಕಟ್ಟಡದ ಕೌಶಲವು?
'ಸರ್ವ ಧರ್ಮದ ಹುರುಳು ಸತ್ಯ ಮರ್ಮದ ತಿರುಳು.'
ಆವಶ್ಯಕದ ಸಾಲ ತೀರಿಸಲು ತಿರೆಯಲ್ಲಿ
ನಾವೀನ್ಯ ಜನಿಸುವುದು ನಾಮ ವೈವಿಧ್ಯದಲಿ
ಭಾವಿಸಲು ಧರ್ಮ ಮತ ಪಂಥ ಪಂಥಗಳ ಪಥ
ಧಾವಿಸುವುದೊಂದೆ ನೆಲೆಗಾ ನೆಲೆಯೊಳಲ್ಲೊಮ್ಮೆ.
ನಾವೆಲ್ಲ ಸೇರೋಣ ಮತ್ತೊಮ್ಮೆ. ಸೈರಣೆಯ
ಕೊಂಡು ಶಾಂತಿಯ ತಳೆಯಿರಿಂದು ತೃಪ್ತಿಯನಾಂತು."

ಮಳೆಗರೆದು ಬಾನು ಬುವಿಯನು ತಣಿಸದೇ? ಅಂತೆ-
ಎಡವಿದನನೆತ್ತುವುದೆ ನರನ ಮೃತ್ಯುಂಜಯತೆ-
ಯೆಂಬ ತತ್ತ್ವದ ನುಡಿಗೆ ನಿಕಷವಾಯಿತು ನಡತೆ.

ಖಾನ ಕೇಳಿದನೆಲ್ಲವನು ವೇದನಾಪ್ರಜ್ಞೆ
ತಾನೆ ಮುಚ್ಚಿತು; ಮಂದಹಾಸದೋಲ್ ಮೊಗದಲ್ಲಿ
ಕಾಣಿಸಿತು ಸುಳಿವು; ಬಾಷ್ಪದ ಕಣವು ಕೊನೆಗಿಳಿದು
ಕಣ್ಣ ತೊಳೆಯಿತ್ತು! ಪ್ರಯಾಸದಲಿ ಹೇಳಿದನು-:
"ಓ ಮಹಾತ್ಮಾ!... ಕ್ಷಮಾಮೂರ್ತಿ... ಕಣ್ದೆರೆಯಿಸಿದೆ;
ಮೂಗರಿದು ಕನ್ನಡಿಯ... ಕೈಗೆ ಕೊಡುವೆಯೊ... ಎಂದು
ಬಗೆದೆನ್ನ ಬಗೆಯ... ಕಿಲ್ಬಿಷಗಳೆದೆ!... ನೆಮ್ಮದಿಯ
ನೊರೆದೆ... ಶಾಂತಿಯ ಬಗೆದೆ... ಯಾತ್ಮಕ್ಕೆ!... ಸೌನಿಕನ
ಕಟ್ಟೆಯಲಿ.. ಬುದ್ಧನೆನೆ.. ಮೆರೆದೆಯಾ.. ಮಾಪುರುಷ?
ವಂದನೆಯು..ವಂದನೆಯು..ಒಲಿಯಲಿ ಜಯಾಂಗನೆಯು!
ಧರ್ಮಸಂ..ಸ್ಥಾಪನೆಯು..ಸತ್ಪಥ..ವ್ಯಾಪನೆಯು
ನಿನ್ನದೆಸೆ..ಯಿಂದಕ್ಕೆ.. ನಿಮಗೆಲ್ಲ..ಜಯವಕ್ಕೆ.."

ಕಣ್ಣು ಹೊರಳಿತು ಖಾನನಿಗೆ ತೇಲಿ ಮೇಲ್ಕೈಸಿ
ಕಾಣ್ಕೆ ಕಂಡಿತ್ತೆನಲು ನಿಡುನೋಟದಲಿ ನೋಡಿ–:
"ಯಾರೆನ್ನ..ಆಯೆ..ಷೆಯೆ? ಬಂದೆ..ಚಿನ್ನಾ..ಬಂದೆ.."
ಎಂದೊಡನೆ ಕಣ್ಮುಗಿದು ಕೊರಳು ಕುಸಿಯಿತು ಕೆಲಕೆ!

ಕರಿಮ ಸಯ್ಯದರಾಗ ಕಣ್ಣೀರ ಸುರಿಯುತಿರೆ,
ಕೃಷ್ಣಾಜಿಯುದ್ವೇಗ ಭರದಿಂದ ಬಿರಿಯುತಿರೆ,
ಮರಳಿದರು ಕುಣಬಿ ಮಾವಳಿ ಜನರು ಗೆಲವೆಣ್ಣು
ವರಿಸಿ 'ಹರಹರ' ಘೋಷದಲಿ ಬಾನ ಬಿರಿಯಿಸುತ!
ಸೆರೆಯಾಳ ತಂಡವನು ತರೆ, ಶಿವಾಜಿಯು ಕಂಡು
ನಿಲಿಸಿದನು ಗದ್ದಲದ ಜಯಕಾರಗಳನೆಲ್ಲ.
ಮತ್ತೆ ಸಯ್ಯದ ಕರಿಮರಿಗೆ– "ವೀರ ಪುಂಗವರೆ,
ನಿಲಿಸಿರೀ ಮರುಕವನು ಮುಂಗಜ್ಜವನು ನೆನೆದು.
ಹರಿವ ಹೊನಲಿಗೆ ನೆಲದ ಗುಣ ಬಹುದು ಸಾಜದಲಿ;
ಕಂಡಿರಲ್ಲವೆ ನೀವು ಖಾನನಂತ್ಯವ? ಶಾಂತಿ-
ಗೊಂಡು, ಸಂತೃಪ್ತಿಪೂರಿತದುಸಿರ ಹೊರಗೆಳೆದು
ಸಂದನಾ ಸಗ್ಗ ಸೀಮೆಗೆ ಗಂಡುಗೈತದಲಿ.
ಸಾವಲ್ಲವಿದು ಸೊರಗೆ, ನೋವಲ್ಲವಿದು ಮರುಗೆ!
ಬಿದಿಯ ಹೊತ್ತಗೆಯಲ್ಲಿ ಬುವಿಯ ಸಾಲದ ಲೆಕ್ಕ
ಕುದುರಬೇಕೇ? ಅಲ್ಲ– ಮುದುರಬೇಕೇ? ಹೇಳಿ!
ಮುದುರಿತಿಂದಿಗೆ ಕರ್ಮ ಖಾನನದು; ಐಹಿಕದ
ಬದುಕಿಗೋ ಸಾವಿನದೆ ನೆರವು ನೆಲೆಯಾಗಿರಲು
ಗಳಿಗೆ ಗಳಿಗೆಗು ಸನಿಯ ಧಾವಿಸುವುದೇತಕೆನೆ
ಜಗದ ನವತೆಗೆ ಜವನು ಮೂಲ ಕರ್ತಾರನಿರೆ,
ಹಗೆ ಮೈತ್ರಿ, ಸೋಲು ಗೆಲವೆಂಬ ದ್ವೈಧದ ಪಾಶ
ಬಿಗಿದು ಜೀವಾಳಿಯನು ಸೆಳೆಯಲೇ ಬೇಕಲ್ತೆ?
ಅಂತೆ, ಖಾನನನಿಂದು ಸೆಳೆದನೋ, ನಾಳೆಗೆನೆ

ಎಂತೊ ಎಲ್ಲಿಯೊ ಯಾರನೋ ಗುರಿಯ ಕಂಡಿಹನು!
ಏಳಿರೆದ್ದೇಳಿ, ನಮ್ಮವರು ಸೆರೆಹಿಡಿತಂದ
ಆಳುಗಳನೆಲ್ಲವರ ಕೂಡಿ ನಡೆಯಿರಿ; ನಿಮ್ಮ
ನಾಯಕನ ಹೊತ್ತು, ಬಿಜಪುರಕಿತ್ತು, ಸಂಸ್ಕಾರ-
ದಾಯತಿಗೆ ನೆರವಾಗಿರಿಂ"ದ ಹಿತವಚನದಲಿ.

ತುಂಬಿ ಬಂದಿತ್ತೆಲ್ಲವರ ಹೃದಯವೀ ತೆರನ
ನಂಬಿಕೆಯ, ವಿಶ್ವಾಸ, ವಿನಯ, ಮಾನವತೆಗಳ
ಬಿಂಬವನು ಕಂಡರಿದರಿಲ್ಲ! ಸೆರೆಯಾಳುಗಳ
ಸೋದರರಿಗೂ ವಿಕ್ಕುತಾಧರಿಸಿ ಕಳುಹುವರೆ?
ಔದಾರ್ಯದಬ್ಧಿಯಲಿ ಮುಳುಗಿ, ಸಯ್ಯದ ಕರಿಮು-
ರಂತೆ ವಿಕ್ಕವರೆರಡು ನೂರು ಸೆರೆಯಾಳುಗಳು
ಕಾರುಣ್ಯಕಾಸಾರವೀಸಾಡಿ, ಸೌಹೃದದ
ಸುಧೆಯುಂಡು ತೇಗಿ, ಮೆಲುಮಾತಿನಲಿ ಬಾಗಿ, ಬಲು
ಮಾಗಿ ಸಂಸ್ಕಾರದಲಿ, ಬೀಗಿ ಸತ್ಕಾರದಲಿ
ತೂಗಿ ತೊನೆದಾಡಿದರು; ಕೂಗಿ ಕೊಂಡಾಡಿದರು.
ಕಣ್ದುಂಬಿ ಕೈಮುಗಿದು, ದಿಂಡುರುಳಿದರು ಹಲರು;
ಕೈಯೆತ್ತಿ ಕುಣಿಯುತುದ್ಗಾರ ಗೈದರು ಕೆಲರು!

ಖಾನನ ಕಳೇಬರವ ಪಾಲಕಿಯೊಳಿರಿಸುತ್ತ
ಕಟ್ಟಾಳುಗಳು ಹೊತ್ತು ನಡೆಯುತಿರಲಾ ಹೊತ್ತು
ಪಡುವಲಲಿ ಇಳಿಹೊತ್ತು ಮೃಡನ ಮೂರನೆ ಕಣ್ಣ
ಕಡು ಕೆಚ್ಚನೆಯ ಬಣ್ಣ ತಳೆಯೆ, ಪಡುವಣ ಬಾನ
ಕೆಂಜವನಿಕೆಯ ಸರಿಸಿ ಸಂಧ್ಯಾಧಿದೇವಿ ಮನ
ವಾತ್ಸಲ್ಯದಲಿ, ತನ್ನ ಮಗ– ನೇಸರನು ಜಗದ
ಹಿತಕರ್ಮದುದ್ಯಮದಿ ದಿನವಿಡಿಯ ದುಡಿದುಡಿದು
ದಣಿದು ಮನೆಸೇರಿರಲು, ಹಾಲಗಿಂದಲು ಹಣ್ಣು-

ಗಳ ಬೆಳ್ಳಿ ಹರಿವಾಣದಲಿ ಕೂಡಿ ಮುಂದಿರಿಸಿ-
ದಂತೆ ಮೂಡಣ ಕೆಲದಿ ಮೂಡುತಿರೆ ವಿಧುಬಿಂಬ,
ತಳಿಗೆ ಬಟ್ಟಲೊಳಾರತಿಯ ಹಿಡಿದು, ಸಾರ್ಥಕ್ಯ-
ದೆಳೆಯ ಕಳೆಗೂಡಿರುವ ಮೊಗದಿ ಮಂದಸ್ಮಿತವ
ತಳೆದು ಜೀಜಾದೇವಿ ದುರ್ಗದಿಂದಿಳಿತಂದು
ನಿಲೆ ಶಿವಾಜಿಯ ಕೆಲದಿ ಹರಸಿ ಕರಗಳನೆತ್ತಿ,
ತಲೆರುಮಾಲಿನ ತುದಿಯು ತಳಿರಡಿಯ ತೊಡೆವಂತೆ
ತಾಯಡಿಗೆ ತಲೆಯಾನಿಸಿದನಾಹ ಕೃತಿಧನ್ಯ!



## ಯುಗಪುರುಷ ಪ್ರಕಟನಾಲಯದ

## [ಮೂರನೆ ಮುಗುಳು] ಸಮರ್ಪಣೆ

.....ಕವನ ಸಂಗ್ರಹವನ್ನು ಓದಿದೆ..... ಕವನಗಳೆಲ್ಲವೂ ಚಲೋದಿವೆ. ಕೆಲವು ಬಹಳ ಲೇಸಾಗಿವೆ. ಉದಾ:- 'ಕಾವ್ಯಕನ್ಯೆ', 'ಬಾಳ್ದೋಟ' ಇ.ಇ. ಇಂಥವನ್ನು ಒಮ್ಮೆ ಓದಿದರೆ ಮತ್ತೆ ಮರೆವಂತಿಲ್ಲ. ರಚಕರನ್ನು ಮನವಾರೆ ಅಭಿನಂದಿಸುತ್ತೇನೆ. ಈ ಚಲೋದಾದ ಕೃತಿಯನ್ನು ಓದುಗರು ಮೆಚ್ಚುವರೆಂದು ಕೋರುತ್ತೇನೆ.

—ರಾಷ್ಟ್ರಕವಿ ಗೋವಿಂದ ಪೈ.

......ಶ್ರೀ ಕಮಲನಾಭರ ಸ್ವತಂತ್ರ ಕವಿತೆಗಳು ನಮಗೆ ಹೆಚ್ಚು ರುಚಿಕರವೆನಿಸಿದವು. ಅದರಲ್ಲಿಯೂ ಸಮರ್ಪಣೆ, ಮಂಗಳೂರ ಮಲ್ಲಿಗೆ, ಕಾವ್ಯಕನ್ಯೆ, ಬಾನ ಕಡೆಯೋಕುಳಿ ಕವಿತೆಗಳು ಕವಿಕಲ್ಪನೆ, ಸುಸಂಗತ ಶಬ್ದ-ಶೈಲಿಗಳಲ್ಲಿ ಮಿಕ್ಕೆಲ್ಲವುಗಳನ್ನು ಮೀರಿ ನಿಂತಿವೆ. —ಡಾ। ಮ. ಗೋಪಾಲಕೃಷ್ಣರಾಯರು.

## [ನಾಲ್ಕನೆ ನಳಿನ] ಸುಮ ಸಂಚಯ

......ಶೀರ್ಷಯಜ್ಞವೆಂಬ ನೀಳವಾದ ಕಥನಕವನವು ಈ ಪದ್ಯ ಸಂಗ್ರಹದ ಮುಕುಟಮಣಿಯಾಗಿದೆ...... ಈ ಕವನದ ಭಾವಸಂಪತ್ತು ರಸಸ್ಯಂದಿಯಾಗಿ ಹೃದ್ಯವಾಗಿದೆ. —ರಾಷ್ಟ್ರಮತ, ಮಂಗಳೂರು.

......ಭಾಷಾಪ್ರಭುತ್ವ ಮತ್ತು ಭಾವಮಾಧುರ್ಯಗಳಿಗೆರವಾಗಿ ನಿಂತ ಮಾಲಿಯಿದು...... ಕವನಗಳಲ್ಲಿ ನೆಲೆಗೊಳಿಸಿದ ವಿಚಾರ, ಕವಿಜೀವನಾಯತ್ತ ಭಾವಸಂಪತ್ತು, ರಚನಾ ವಿಲಾಸ- ಇವುಗಳಲ್ಲಿ ಕವಿಧರ್ಮಾಯತ್ತ ಸ್ವಾತಂತ್ರ್ಯವು ಕಂಡುಬರುವುದು ಶ್ಲಾಘ್ಯವಿದೆ. ಒಪ್ಪಿನಿಂತ ಕಥಾಭಾಗ, ಜತೆಗೂಡಿನಿಂತ ಕವಿತಾಚಾತುರ್ಯ, ಒಪ್ಪನೇರಿದ ಅಲಂಕಾರ- ಇವೇ ಈ ಬಗೆಯ ಆಕರ್ಷಣೆಗಿರುವ ವಿಧಾನಗಳು.....

—ರಾಯಭಾರಿ, ಉಡುಪಿ.

......ಶ್ರೀ ಕಮಲನಾಭರ ಕವನಗಳಲ್ಲಿ ಅಂತಹ ಸಮರ್ಥ ಕವಿಯ ಮಿಂಚು ಹೊಳೆಯುತ್ತದೆ. ನಿತ್ಯ ಬಳಕೆಯ ಶಬ್ದಗಳ ದಳಗಳಿಂದಲೇ ಅವರು ಉತ್ತಮ ಉಲ್ಲಸಿತ ಕಲ್ಪನಾಕುಸುಮಗಳನ್ನು ಅರಳಿಸುತ್ತಾರೆ. ಈ ಸಂಕಲನದಲ್ಲಿಯ ಹನ್ನೊಂದು ಕವಿತೆಗಳಲ್ಲಿ ರಸಿಕರನ್ನು ತಲೆದೂಗಿಸುವ ಸ್ವತಂತ್ರ ಕಲ್ಪನಾಮೂರ್ತಿಗಳಿವೆ.

—ಕಲಿಯುಗ, ಮಂಗಳೂರು.

...ಶ್ರೀ ಕಮಲನಾಭರ ಶೈಲಿಯು ರಸವತ್ತಾಗಿದೆ. ಹಲವು ಉತ್ತಮ ಪ್ರಯೋಗಗಳೂ ಅಲಂಕಾರೋಪೇತವಾದ ಮಾತುಗಳೂ ಮಿಂಚಿ, ಪದ್ಯಗಳಿಗೆ ವಿಶೇಷ ಮೆರುಗನ್ನಿತ್ತಿವೆ...... ಆದುದರಿಂದ ಪಂಡಿತರೂ ಪಾಮರರೂ ಕೂಡಿಯೇ ಸವಿಯುವ ಸಂಕಲನವಾಗಿದೆ 'ಸುಮ ಸಂಚಯ'. —ನವಯುಗ, ಉಡುಪಿ.

# ಯುಗಪುರುಷ

(ದ. ಕನ್ನಡ ಜಿಲ್ಲೆಯ ಮೇಲ್ತರಗತಿಯ ಏಕೈಕ ಸಾಹಿತ್ಯಿಕ ಮಾಸಪತ್ರಿಕೆ.)

—o—

ವರ್ಷಂಪ್ರತಿ ರೂ. ೫ನ್ನು ತೆತ್ತು ಚಂದಾದಾರರಾಗುವ ನೆರವುಗಾರರಿಗೆ ಯುಗಪುರುಷದ ೧೨ ಸಂಚಿಕೆಗಳನ್ನೂ, ರೂ. ೧ ಬೆಲೆಯ ವಿಶಿಷ್ಟ ರೀತಿಯ ವಿಶೇಷಾಂಕವನ್ನೂ, ರೂ. ೩ ಬೆಲೆಯ ಪ್ರಕಟನೆಗಳನ್ನೂ ಪ್ರತಿ ವರ್ಷ ಪಡೆಯುವ ಸೌಲಭ್ಯ.

ಮೊದಲ ವರ್ಷದ ಕೃತಿಗಳು:-

| | | | |
|---|---|---|---|
| ೧. | ಕ್ಷಾತ್ರದರ್ಶನ | [ಅ. ಗೌ. ಕಿ.] | ೧—೦—೦ |
| ೨. | ಯೋಗಲಹರಿ | [ಅ. ಗೌ. ಕಿ.] | ೧—೦—೦ |
| ೩. | ಸಮರ್ಪಣೆ | [ಕಮಲನಾಭ] | ೧—೦—೦ |

ಎರಡನೆ ವರ್ಷದ ಕೃತಿಗಳು:-

| | | | |
|---|---|---|---|
| ೧. | ಸುಮ ಸಂಚಯ | [ಕಮಲನಾಭ] | ೧—೦—೦ |
| ೨. | ಶಿವ ಲೇಶ್ಯೆ | [ಅ. ಗೌ. ಕಿ.] | ೧—೮—೦ |
| ೩. | ಬೇವು ಬೆಲ್ಲ | [ಪ. ಸೀ. ಭ.] | ೦—೮—೦ |

ಯುಗಪುರುಷ ಪ್ರಕಟನಾಲಯ,

ಕಿನ್ನಿಗೋಳಿ, ದ. ಕ.